# ಭಾರತೀ ಗ್ರಂಥಮಾಲಾ



ಮಾಲೆ ೧

ಮಣಿ ೨

# ತಿನಿಸು

॥ ವಂದೇ ಮಾತರಂ ॥

ಪ್ರತಿ ಎರಡು ತಿಂಗಳಿಗೊಮ್ಮೆ ಹೊರಡುವ

# ಭಾರತೀ ಗ್ರಂಥಮಾಲಾ

ಕಟಪಾಡಿ, ದ. ಕ.

ಮಾಲೆ ೧ ಮಣಿ ೨




# ತಿನಿಸು

1 ನವಂಬರ 1938

ನಿರ್ದೇಶಕ:

ಕೆ. ಬಿ. ಸೀತಾರಾಮ ಧೊರೆಬಲ್ಲಾಳ

ಸಂಪಾದಕ:
ಯಂ. ಯಸ್. ಹೆಗ್ಡೆ, ಶಿರ್ವ.

ಪ್ರಕಾಶಕ:
ವೈ. ರಾಮಕೃಷ್ಣ ಪುರಾಣಿಕ.

ಬಿಡಿ ಪ್ರತಿಗೆ
ರೂ. 0—4—0

ವಾರ್ಷಿಕ ಚಂದಾ
ರೂ. 1—8—0

(ಇದರ ಎಲ್ಲಾ ಹಕ್ಕು ಕಾದಿಡಲ್ಪಟ್ಟಿದೆ.)

ತುಳುನಾಡ್ ಛಾಪಖಾನೆ, ಉಡುಪಿ

# ಅನುಕ್ರಮಣಿಕೆ

## ನಮ್ಮ ಏಜಂಟರುಗಳು



೧. ಕೆ. ಮುದ್ದು ಶೆಟ್ಟಿ, ಕಟಪಾಡಿ.

೨. ಸಚ್ಚಿದಾನಂದ ಸ್ಟೋರ್ಸ್,
ಕುಂದಾಪುರ, ದ. ಕ.

**ಯೋಗ್ಯ ಏಜಂಟರುಗಳು ಎಲ್ಲೆಲ್ಲಿಯೂ ಬೇಕಾಗಿದ್ದಾರೆ.**

ಹೆಚ್ಚಿನ ಮಾಹಿತಿಗಳಿಗೆ ಈ ಕೆಳಗಿನ ವಿಳಾಸಕ್ಕೆ ಬರೆಯಿರಿ.

**ಭಾರತೀ ಗ್ರಂಥಮಾಲಾ ಆಫೀಸ್,**
**ಕಟಪಾಡಿ, ದ. ಕ.**






# ಸೆಂಡಾಟ

ಸೆಂಡು ಹಾರಲಿ ಮುಂದೆಸಾಗಲಿ ಗುರಿಯ ಬೇಗನೆ ಸೇರಲಿ
ಪಾದಘಾತಕೆ ಚಿಮ್ಮಿ ಚಿಗಿಯುತ ಜಿಂಕೆಮರಿಯಂ ಹೋಲಲಿ.

ಬೈಗು ಭಾಸ್ಕರ ಪಶ್ಚಿಮಾಂಗನೆಯೊಡನೆ ಪಡುವಣ ಕಡಲಿಗೆ
ನೀರಿನಾಟಕೆ ಇಳಿಯೆ ಹೋದನು ಬನ್ನಿ ಸೆಂಡಿನ ಆಟಕೆ.
ಪ್ರಕೃತಿ ಪುರುಷರು ತೆರೆಯುತಿರಿ ಕಲ್ಲಾಡುವಂದದಿ ಪ್ರಣಯದೀ
ಫಣಿಪ ಹೆಡೆಮಣಿಯನ್ನು ಕೀಳುತ ಸೆಂಡಿನಾಟವನಾಡಿರಿ.

ಕಾಲ ತುಳಿತಕೆ ನೆಲವು ಅದುರಲು ಅಟ್ಟಹಾಸಕೆ ಗಗನವು
ಸೆಂಡಿನೋಟಕೆ ಸೂರ್ಯಚಂದ್ರರು ಬೆದರಿ ಮುಗಿಲಿನ ಮರೆಯೊಳು.
ಅಡಗುವಂದದಿ ರುದ್ರ ಭೀಷಣ ದೃಶ್ಯಮಾನವ ಕಲ್ಪಿಸಿ
ಕಡುಗಿ ನಿಮ್ಮೊಳು ಚಪಲೆ ಜಯಸಿರಿ ಮೊಗಕೆ ಬೆಗಡನು ಬಳಿಯಿಸಿ.

ಅರಳಿ ಪರಿಮಳ ಸೂಸಿ ತನಿರಸವನ್ನು ತಾಳ್ದಿಹ ಹೂವೊಳು
ಪರಮೆತೋರದೆ ಭೇದಭಾವವ ಬಂದು ಹೀರುವ ತೆರದೊಳು
ಜಾತಿಕುಲಗಳ ತಕ್ಕುತೌಳಿಗೆ ಸಿಲುಕಿ ದುಃಖದ ಹೊರೆಯನು
ಆತುಕೊಳ್ಳದೆ ಭ್ರಾತೃಭಾವದಿ ಸವಿವ ಬಾಳಿನ ಸೊದೆಯನು.

P. S. Ninjoor, B. A.

# ಹ ಸು ರು ವಾ ಣಿ

ಹೆಸರಾದ ದೇಶವಿದು
ಹಸನಾದ ಪೈರಿಗೆ
ಪಶುಪೈರು ಪಕ್ಷಿಗಳ
ಯುಶವಿಂತಿಹುದು ನಮಗೆ ೧

ಹಳ್ಳಿ ಸಾಮ್ರಾಜ್ಯವಿದು
ಸುಳ್ಳಲ್ಲ ಭಾರತವು
ಟೊಳ್ಳು ಗಿಲಿಟುಗಳಿಲ್ಲ
ಹಳ್ಳಿಗರ ಜೀವನವು ೨

ದೇಶದಾ ಉಸಿರಿಹುದು
ವಾಸಿ ಗ್ರಾಮಗಳಲ್ಲಿ
ದಾಸರಾಗುವ ನಾವು
ಭೂಷಣಗಳನು ತೊರೆದು ೩

ಹಸುರಾದ ಬಣ್ಣದಲಿ
ರಸವೇನು ಶೋಭಿಪುದು
ವಸವಿರಿಸಿ ಮನವನ್ನು
ಹಸನಾಗಿ ಮಾಡ್ವುದದು ೪

ಹಕ್ಕಿಗಳ ಚಿಲಿಪಿಲಿಯು
ಉಕ್ಕಿಬಹ ನದಿತೊರೆಯು
ಸೊಕ್ಕಿನಲಿ ತೂಕಡಿಪ
ಲೆಕ್ಕವಿಲ್ಲದ ಬೆಳೆಯು ೫

ಸೊಗದ ಮೊಗದಾ ಜನರ
ಸೊಗಸಿನಾ ದನವಿಂಡ
ಮಿಗೆ ಚಿಂತೆ ಹರಿಸಿ ಜನ
ಜಗವ ಮೋಹಿಪ ನೋಟ ೬

ಕೃಷಿಯೂರ ಕೃಷಿಗುರುತು
ಹೆಸರಾದ ಹಸುರಿಹುದು
ಕೆಸರ ಕೈಯಲಿ ನಮ್ಮ
ಮೊಸರಿಂದ ಉಣ್ಣಿಪುದು ೭

ಕರೆದು ಆಶಯವಿತ್ತು
ಒರಸಿ ಅಪವಾದಗಳ
ವರವನೀಯುವುದಿದುವು
ಹರುಷವೈ! ಜಗಕೆ ಕಲ್ಯಾಣವಾಣಿ

ಪಾವನದ ಜೀವನಕೆ
ಕಾವವನ ಯೋಗಕ್ಕೆ
ಭಾವಿಸಲು ಸ್ವಾತಂತ್ರ್ಯ
ದೇವಪೂಜೆಯ ಬಗೆಗೆ ೯

ಇದುವೆ ನಿರ್ಭಯವಾಣಿ
ಭಾರತಿಗೆ ಕಲ್ಯಾಣಿ!
ಕದತೆರೆದು ಕರೆವ ಸುಖ
ಕೊಡುವ ಸಿರಿವಾಣಿ! ೧೦

M. S. H.

# ಸೀತುವಿನ ಪ್ರೇತ

## ೨೦ನೇ ಶತಮಾನದಲ್ಲೂ ನಡೆದುಬರುತ್ತಿರುವ
## ಹಳ್ಳಿಯ ಕುರುಡುಭಾವನೆ.

(ಲೇಖಕ. — ಯಂ. ಯಸ್. ಹೆಗ್ಡೆ, ಶಿರ್ವ.)



ಸೀತುವಿನ ಪ್ರಾಯ ಐವತ್ತಕ್ಕೆ ಮೇಲ್ಪಟ್ಟಿತ್ತು. ಬರೀ ರೂಪು ರೇಖೆಗಳಿಂದ ಹೇಳುವುದಾದರೆ ಆಕೆಯು ಮೂವತ್ತು ವರ್ಷದ ಯೌವನಸ್ಥಳು. ಈ ವರೆಗೆ ಹೆತ್ತು ಸಲಹಿದ ಹನ್ನೆರಡು ಮಕ್ಕಳ ಸರದಿಯಲ್ಲೂ, ಸಲಕ್ಕೆ ಎರಡು ಮಣ ಮದ್ಯದ ಶರಾಬನ್ನಾದರೂ ಕುಡಿದು, ಐದು ವರಹಗಳ ತಿಂಡಿತಿನಸನ್ನಾದರೂ ಜೀರ್ಣಿಸಿಕೊಳ್ಳುತ್ತಾ ಬಂದುದರಿಂದಲೇ ಆಕೆಯು ಅಷ್ಟೊಂದು ರೂಪವತಿಯಾಗಿರುವುದು. ಸೀತುವು ಚಿಕ್ಕವಳಿದ್ದಾಗ ತುಂಬಿದ್ದ ಮನೇ ಜಿಂದಿಗೆಯೂ (ಕ್ರಯಬಾಳುವ ಚರಸೊತ್ತು) ಎಮ್ಮೆ, ಎತ್ತುಗಳೂ, ಗಿಳಿಯೋಲೆ, ಫೈಜಾನಿ, ವಂಕಿ, ದುಂಡುದೋರೆ, ಗೆಜ್ಜೆಟೇಕು, ನೆತ್ತಿ ಬೈತಲೆ ಜಡೆಗೊಂಡೆ (ಆಭರಣಗಳ ಹೆಸರು) ಇತ್ಯಾದಿ ಆಭರಣಗಳೂ, ಬಣ್ಣಾಟದ ಶಿಲ್ಪಿಕೆಲ್ಸದ ಕಂಭ, ಬಾಗಲು ವಗೈರೆ ಹಳೇ ಮೋಪುಗಳೂ, ಈ ಹೊತ್ತಿಗೆ ಮಾಯವಾಗಲು ಆಕೆಯೂ ಒಂದು ವಿಧದಲ್ಲಿ ಕಾರಣಳಾಗಿದ್ದಳು. ಚಿಕ್ಕಂದಿನಿಂದಲೂ ಚಕ್ಕಂದಾಯದಿಂದ ಬೆಳೆದ ಆಕೆಗೆ ದೊರೆತ ಗಂಡನಾದರೂ ಅಂಥವನೇ! ಹೆಂಡತಿ ಎಂಬ ಭಾವನೆಯು ತುಂಬಾ ಇದ್ದ ಆಕೆಯ ಗಂಡನಾದರೂ ತಾಯಿತ್ವವನ್ನೂ ಆಕೆಯಲ್ಲೇ ಇಟ್ಟಿದ್ದನು. ಇದು ಗಡ್ಡ ಮೀಸೆ ಬಾರದ ಗಂಡಸುತನವನ್ನು ಸಾರುತ್ತಿತ್ತು. ಹದಿಮೂರನೇ ಸಲದ ಗರ್ಭವತಿ ಸೀತುವು ಒಂಭತ್ತು ತಿಂಗಳ ವೇದನೆಯಲ್ಲಿದ್ದಳು. ಮುದಿ ತಂದೆಯೂ, ಹೆಸರಿನ ಗಂಡನೂ ಸಾಕಷ್ಟು ಉಪಚರಿಸುತ್ತಿದ್ದರು. ಸಣ್ಣ ಪುಟ್ಟ ಹರಕೆಗಳು, ಪ್ರೇತ, ಭೂತಗಳಿಗೆ ಚೀಟು ಊಟಗಳೂ,

ಸುಳ್ಳು ಸಾಕ್ಷಿಯುಲ್ಲೂ, ಬಲವಾಟಾದಿಗಳಲ್ಲೂ, ಹೆಸರಾಂತ ಊರ ಕಪ್ಪು ಭಟ್ಟರಿಂದ ಸತ್ಯನಾರಾಯಣ ಕಥೆಗಳು, ನಾಗಕಲ್ಲುಗಳ ಉಪಚಾರಗಳು ಎಲ್ಲವೂ ನಡೆದುವು. ಆದರೆ ಸೀತುವಿನ ಬೆನ್ನು ನೋವು ಗುಣಮುಖ ವಾಗಲಿಲ್ಲ. ಎಂಥಾ ಮಾಟಗಾರರೂ, ಪ್ರವೀಣ ಪ್ರವಾದಿಗಳೂ, ಭಟ್ಟರು ಗಳೂ ಎಲ್ಲರೂ ಹೇಳಿದುದು ಒಂದೇ—ಒಂದು ವರ್ಷದಿಂದೀಚೆಗೆ ತೀರಿ ಹೋದ ಯೌವನಸ್ಥ ಪ್ರೇತದ ಕೈಯಾಟ ಎಂದು. ದಿಗಿಲುಹಾರಿದ ಸೀತುವಿನ ಗಂಡ ತಂದೆಯರು ಎಷ್ಟು ಎಣಿಸಿದರೂ ಒಂದಲ್ಲ ಎರಡು ವರ್ಷಗಳಿಂದೀಚೆಗೆ ತಮ್ಮ ಸಂಬಂಧಿಕರಾರೂ ತೀರಿಹೋದದ್ದೇ ಅಂಡಾ ಜಿಗೂ ಬರಲಿಲ್ಲ. ಮನುಷ್ಯ ಪ್ರಯತ್ನಕ್ಕೆ ನಿಲುಕದ ಈ ಸಂದರ್ಭವನ್ನು ದೈವದೊಡನಾದರೂ ಕೇಳಿ ತಿಳಕೊಳ್ಳುವುದು ಒಳ್ಳೆಯದೆಂದು ಅಭಿಪ್ರಾಯ ಮಾಡಲಾಯಿತು. ಸೀತುವಿನ ಸಲಹೆಗಳನ್ನು ಕೇಳಿ ಆಕೆಯ ತವರು ಮನೆ ಬಳಿಯ ಪ್ರಸಿದ್ಧ ಪಾತ್ರಿ ಬಾಬಯ್ಯನನ್ನು ಮರುಮಂಗಳವಾರವೇ ಕರೆತರಿಸಿ ದೈವದ ದರ್ಶನಮಾಡಿಸಿ ಎಲ್ಲದರ ಇತ್ಯರ್ಥವನ್ನೂ ಮಾಡುವು ದೆಂದು ನಿಶ್ಚಯಿಸಲಾಯಿತು.

ವರ್ಷದಲ್ಲಿ ಆರು ತಿಂಗಳು ತವರುಮನೆಯಲ್ಲಿರುವ ವಾಡಿಕೆಯ ಸೀತುವಿಗೆ ಬಾಬಯ್ಯನ ಗುರುತವು ತುಂಬಾ ಇತ್ತು. ಆಕೆಗೆ ಚೀಟು ಕಟ್ಟಲು, ಸೋಣಸಂಕ್ರಾಂತಿ, ಸುಬ್ರಹ್ಮಣ್ಯಷಷ್ಠಿ, ಮಹಾಲಯ ಅಮಾವಾಸ್ಯೆ, ಉಡ್ಪಿಜಾತ್ರೆ, ಕಾರ್ಕಳದೀಪೋತ್ಸವ, ಮೂಲ್ಕಿಯ ದರ್ಶನ ಇತ್ಯಾದಿಗಳಲ್ಲಿಗೆ ಬಾಬಯ್ಯನೊಡನೆ ಹೋಗಲು ಸೀತುವಿಗೆ ತುಂಬಾ ಧೈರ್ಯ, ಉತ್ಸಾಹ! ಸ್ತ್ರೀ ಸೋದರನಾದ ಬಾಬಯ್ಯ ಪಾತ್ರಿ ಯಾದರೂ ಅಭಿಮಾನದಿಂದ ಅಂಥಾ ಪರೋಪಕಾರದ ಕೆಲ್ಸಗಳನ್ನು ಮಾಡುತ್ತಿದ್ದನು. ಆ ದೇವರು, ಈ ದೈವ, ಆ ಅಮ್ಮ, ಈ ಅಕ್ಕ ಎಂದು ಪಾತ್ರಿಯರಿಗೆ ಊಟಕ್ಕೆ ಬೇಕಾದಷ್ಟು ಅಕ್ಕಿ ಉಂಬಳಿದೊರೆಯುತ್ತಿತ್ತು. ಕಂಡಾಬಟ್ಟೆ ದೇವರುಗಳ ಸಿಕ್ಕಾಬಟ್ಟೆ ನಗನಾಣ್ಯಗಳು ಪಾತ್ರಿಯ ಕೈ, ಕಿವಿ, ಮೈಗಳಲ್ಲಿದ್ದು ಅವನನ್ನು ನಿತ್ಯ ಮದುಮಗನಂತೆ ಸಿಂಗರಿಸಿದ್ದುವು. ಶೃಂಗಾರಪ್ರಿಯನಾದ ಹೆಣ್ಣುಮರುಳ ಮನಸ್ಸಿನ ಪಾತ್ರಿಯು ತಲೆತುಂಬ

ಮುಡಿದುಕೊಳ್ಳುವ ಚೆಂಡುಹೂವು, ಬಾಯಿತುಂಬ ಕೆಂಪನೆ ತಿನ್ನುತ್ತಿದ್ದ ವೀಳ್ಯದೆಲೆಯೂ, ಪಚ್ಚೆ ಕೆಂಪು ಬಣ್ಣದ ಅಗಲ ಅಂಚಿನ ಹೊದೆದ ಶಾಲೂ, ಹಳ್ಳಿಯೂರುಗಳ ಗದ್ದೆ ಗುಡ್ಡೆಗಳಲ್ಲಿ ತುಂಡು ವಸ್ತ್ರದೊಡನೆ ಗೇಯುತ್ತಿದ್ದ ಗಂಡಾಳು ಹೆಣ್ಣಾಳುಗಳಿಗೆ ಕಣ್ಣಿಗೆ ದೊಡ್ಡ ಹಬ್ಬವನ್ನೇ ಮಾಡುತ್ತಿದ್ದುವು. ದೈವದೇವರುಗಳ ಬಲು ಹತ್ತಿರದ ಸಂಬಂಧಿಕನಾದ ಈ ಪಾತ್ರಿಯೊಡನೆ ಮಾತನಾಡಿ ಜನ್ಮಸಾಫಲ್ಯಮಾಡಿಕೊಳ್ಳಲು ಎಷ್ಟೋ ಮಂದಿ ಹಳ್ಳಿಗರು ಹಾರೈಸುತ್ತಿದ್ದರು. ಅದರಲ್ಲೂ ಈ ವರೆಗೆ ಆಡಿದ-ಮಾಡಿದ ಮಾತಾಗಲೀ, ಬಲಿಬೈದಗಳಾಗಲೀ ಒಂದೂ ಸುಳ್ಳಾಗಿಲ್ಲ ಎನ್ನುವ ಪ್ರಸಿದ್ಧಿಯಿರುವ ಬಾಬಯ್ಯ ಮೇಸ್ತ್ರಿಯ ವಿಷಯದಲ್ಲಂತೂ ಹೇಳಿ ತೀರದು.

ಮರದ ಗೆಲ್ಲಿನಿಂದಾಗಲೀ, ಮನೇ ಮಾಡಿನಿಂದಾಗಲೀ, ಇತರ ಚರ ಸೊತ್ತುಗಳ ಮೂಲಕವಾಗಲೀ, ದೃಷ್ಟಾಂತ ತೋರಿಸಿಯೋ ದೆವ್ವವನ್ನೋಡಿಸುವ ಬಾಬಯ್ಯನ 'ಕಾರ್ಣಿಕ'ವು ಹಳ್ಳಿಯಲ್ಲೆಲ್ಲಾ ಪಸರಿಸಿದುದೂ, ಮಂತ್ರವಾದ, ಮದ್ದು-ಇವುಗಳ ಆಧಾರದಿಂದಲೇ ಬದುಕುತ್ತಿರುವ ಸೀತುವಿಗೆ ಸದ್ರಿ ಪಾತ್ರಿಯರ ವಿಶೇಷ ಪರಿಚಯಾದಿಗಳು ಇದ್ದುದೂ ಆಶ್ಚರ್ಯವಲ್ಲ.

ಸೋಮವಾರ ರಾತ್ರಿಯೇ ಪಾತ್ರಿ ಬಾಬಯ್ಯನು ಸೀತುವಿನ ಮನೆಗೆ ಬಂದಿದ್ದನು. ಅವನ 'ತೈನಾತಿ'ಗೆ (ಒಟ್ಟಿಗೆ) ಬಂದಿದ್ದವನು ಪಾತ್ರಿಯ ಅಲಂಕಾರವಾದ ಗೆಜ್ಜೆಚಲ್ಲಣ, ಇಪ್ಪತ್ತು ಗಜ ಉದ್ದದ ಕೆಂಪು ಲಾಡಿ, 'ಕೊಟ್ಟೆಸರ' (ಭಂಗಾರದ ಹಾರ) ಇವುಗಳನ್ನು ಬಿಡಿಸುತ್ತಾ, "ಅಡಿಗೆಯು ಶುದ್ಧಾಚಾರದ್ದಾಗಬೇಕು. ಮಧುಮಾಂಸ ಸೋಕಿದ ಪಾತ್ರ ಸೌಟುಗಳನ್ನೂ ಉಪಯೋಗಿಸಬಾರದು. ಹೆಚ್ಚುಕಡಿಮೆಯಾದರೆ ಅನರ್ಥವೊದಗೀತು." ಎಂದು ಹೇಳಿ ಹಣೆ ಬೆವರನ್ನೊರಸಿದನು. ತುಂಬಾ ಭಯಭಕ್ತಿಯ ಸೀತುವು ತಣ್ಣೀರ ಸ್ನಾನಮಾಡಿ, ಚಾವಡಿಯಲ್ಲೇ ಒಲೆಯುರಿಸಿ ಪಾತ್ರಿಯ ಅಡಿಗೆ ತಯಾರಿಸಿದಳು. ಉಪಚಾರಗಳಲ್ಲಿ ಹೆಸರುಪಡೆದ ಸೀತುವು ಇಮ್ಮಡಿ ಮೆಹನತ್ತಿನಿಂದ ಕೆಲಸಮಾಡಿ ದಣಿದುಬಂದ ಪಾತ್ರಿಯನ್ನು ಸಂತೋಷಪಡಿಸದೆ ಬಿಡಲಿಲ್ಲ. ರಾತ್ರಿಯಲ್ಲಿ ಎಲ್ಲರೂ ಮಲಗಿದ

ಬಳಿಕವೂ ಸೀತುವು ಪಾತ್ರಿಯ ಮಂಚದ ಬಳಿಗೆ ಪದೇ ಪದೇ ಹೋಗಿ ವಿಚಾರಿಸಿ–ಉಪಚರಿಸಿ ಬರುತ್ತಿದ್ದಳು.

ಬೆಳಗಾತ ಬೆಳ್ಳಗಾಗುವಾಗಲೇ ನೂರಾರು ಜನರು ದೈವಸ್ಥಾನಕ್ಕೆ ಬಂದು ಕಿಕ್ಕಿರಿದಿದ್ದರು. ಅಂದರೆ ಪ್ರಸಿದ್ಧ ಪಾತ್ರಿಯ ದರ್ಶನದ ಸಲುವಾಗಿ! ನಿರ್ಭಿಗಳೆಲ್ಲಾ ತಯಾರಾದುವು. ಸ್ನಾನಮಾಡಿಕೊಂಡು ತಲೆಕೂದಲು ಕೆದರಿಕೊಂಡು ಬರುವಾಗಲೇ ಆತನ ಕೈ ಮುಖಗಳು ನಡುಗುತ್ತಿದ್ದುವು. 'ಚಲ್ಲಣಗೆಜ್ಜೆ'ಯನ್ನು ಸಿಕ್ಕಿಸಿ, ಕೆಂಪು ಪಟ್ಟೆಯಿಂದ ನಡುಬಿಗಿದು ಸೊಂಟದ ಸುತ್ತಲೂ ಹಿಂಗಾರ ಸಿಕ್ಕಿಸಿ, ಗಂಧದ ಲೇಪದಿಂದ ರೂಪವನ್ನು ವಿಕಾರಗೊಳಿಸಿ, ಸರಹಾಕಿ, ಓಲಗ ಸಿಡಿಮದ್ದಿನ ಗಲಾಟೆಯೊಡನೆ ಒಂದು ಕೈಗೆ ಚವರಿಗೊಂಡೆಯನ್ನೂ, ಇನ್ನೊಂದು ಕೈಗೆ ಬೆಳ್ಳಿಯ ಖಡ್ಗವನ್ನೂ, ಕಂಚಿನ ಘಂಟಾಮಣಿಯನ್ನೂ ಕೊಡುತ್ತಲೇ, ಧೂಳೆಲ್ಲ ಪುಟಹಾರುವಂತೆ, ಹಳ್ಳಿಗರ ಎದೆಗಳು ಧಸಕ್ಕಾಗುವಂತೆ, ಕಣ್ಣಾಲಿಗಳಿಂದ ಕಿಡಿಹಾರುವಂತೆ, ತೋಳಸರಿಗೆ ಬಿಗಿದು ತುಂಡಾಗಿ ಬೀಳುವಂತೆ, ಮಂದಿಯ ಬಾಯಿ ಪಸೆಯಾರುವಂತೆ, ದರ್ಶನದ ನಡುಕಕ್ಕಾರಂಭವಾಯಿತು. ಕೊಟ್ಟ ಆರ್ಭಟೆಗೆ ಬೇಡವೆಂದು ಮನೆಗಳಲ್ಲಿ ಕೂತಿದ್ದ ಮುದುಕ ಮುದುಕಿಯರೂ ಶ್ವಾಸಕಟ್ಟಿ ದೈವದ ಗುಡಿಕಡೆಗೆ ಓಡಿಬಂದರು. ನಾಲ್ಕೈದು 'ಡಜನ್' ಸೀಯಾಳಗಳನ್ನು ತನ್ನ ಕಡೆಯ ಗಣಗಳಿಗೆಂದು ನಾಲ್ದೆಸೆಗೆ ಎಸೆಯಲ್ಪಾಯಿತು. ಹಿಂಗಾರದ ಹಾಳೆ ಹಾಳೆಗಳೇ ಚೂರಾದುವು. ಜೇಟಿಗೆ (ದೀವಟಿಗೆ)ಯ ಅಗ್ನಿಯು ಆರಿಹೋಗುವಷ್ಟು ದಣಿದುಹೋಯಿತು ದೀವಟಿಗೆಯನ್ನೆಳೆದೊಯ್ದು, ಮೂರು ಸುತ್ತು ಬಂದು, ಬಗ್ಗಿ ತನ್ನ ಎದೆಗೆ ಪಾತ್ರಿಯು ಇಟ್ಟುಕೊಳ್ಳುವಾಗ, ಪಾಪ! ಕೈಸೋತು ಬಿಟ್ಟುಬಿಟ್ಟ ಮುದುಕ ಮಡಿವಾಳ ಕೂಕ್ರನಿಗೆ ಈ ಮಧ್ಯದಲ್ಲೂ ಒಂದು ಜೋಡು ಕೈಗಾಣಿಕೆಯನ್ನು ಅಪರಾಧವಾಗಿ ವಿಧಿಸಲಾಯಿತು.

ಸೀತುವಿನ ಇಡೀ ಕುಟುಂಬದ ಜಾತಕವನ್ನೂ, ಆ ವರೆಗಿನ ಕಾಯಿಲೆ-ನಡಾವಳಿಕೆಗಳನ್ನೂ ಚಾಚೂ ತಪ್ಪದೆ ಬಾಬಯ್ಯ ಪಾತ್ರಿಯು ದೈವದ ಪತಿಯಿಂದ ಹೇಳುತ್ತಾ ಬಂದನು. ಸುಮಾರು ಹತ್ತುತಿಂಗಳ ಹಿಂದೆ,

ತನ್ನ ಗಂಡನೊಡನೆ ಮಲಬಾರಿಗೆ ಹೋಗಿದ್ದ ಸೀತುವಿನ ಹಿರೇಮಗಳು ವಾಂತಿಭೇದಿಯ ನೆವನದಿಂದ ತೀರಿಹೋಗಿ ತನ್ನ ಗಣಗಳೊಡನೆ ಸೇರಿ ಸಲ್ಪಟ್ಟು ಮೂರು ತಿಂಗಳುಗಳಾದುವೆಂದೂ, ಸೀತುವಿನ ಎರಡನೇ ಮಗಳು ಸಣ್ಣಪ್ರಾಯದಲ್ಲೇ ಗತಿಸಿದ್ದರೂ, ಈಗ ಆಕೆಯು ಪ್ರಾಯಕ್ಕೆ ಬರುವ ಸಮಯವಾಯಿತಾದ್ದರಿಂದ, ಅವಳ ಪ್ರೇತವು ಮದುವೆ, ಅನ್ನನೀರು ಗಳಿಲ್ಲದೆ ಪೇಚಾಟದಲ್ಲಿ ಬಿದ್ದು ಆಗಾಗ ಅನಾಹುತಗಳನ್ನು ಮಾಡುತ್ತಿದೆ ಯೆಂದೂ, ಆಚರೂ ತಾನು ಮಾತ್ರ ಅವಕ್ಕೆ ಪ್ರಕೃತ ಸಮಾಧಾನ ಹೇಳಿರು ತ್ತೇನೆಂದೂ, ಆ ಇಬ್ಬರೂ ಒಟ್ಟುಗೂಡಿ ಸೀತುವಿನ ಎಡಬಲ ಪಾರ್ಶ್ವ ಗಳನ್ನು ಅದಮುತ್ತಿರುವರೆಂದೂ ದೆವ್ವವು, ಹೇಳಿಕೊಟ್ಟಂತೆ ಪಾತ್ರಿಯು ಮುಖಾಂತ್ರ ಹೇಳಿಸಿತು. ಎಲ್ಲರೂ ಅವಾಕ್ಕಾದರು. ಒಬ್ಬರ ಮೊಗವ ನ್ನೊಬ್ಬರು ಪಿಳಪಿಳನೆ ನೋಡಿಕೊಳ್ಳುತ್ತಿದ್ದರು. ದೆವ್ವದ ಕಟಾಕ್ಷವನ್ನು ಕಂಡವರು ತಮ್ಮ ಮನೆಮಾರನ್ನೂ ಕೊಟ್ಟುಬಿಡಲು ಸಿದ್ಧರಾದವರಂತೆ ಬಾಯಿತೆರೆದು ನುಸಿಹೊಕ್ಕು ಹೊರಟರೂ ತಿಳಿಯದೆ ನಿಂತಿದ್ದರು. ತುಟಿ ಯೆತ್ತಿ ಮಾತಾಡುವವರಿದ್ದಿಲ್ಲ. ಕಡೆಗೆ ಮಡಿವಾಳನ ಸೂಚನೆ ಮೇರೆಗೆ, ಸೀತುವನ್ನು ಆಕೆಯ ತಂದೆಯು ತನ್ನೆದೆಗೆ ಒರಗಿಸಿಕೊಂಡು ಮುಂದೆ ನಿಂತನು. ಪಾತ್ರಿಯು ಹಿಂಗಾರವನ್ನು ತೆಗೆದು ತಲೆಮೇಲೆ ಬಿಸಾಡಿ, ಒಳ್ಳೆಮೆಣಸು ಬೆರಸಿ ಕಲಸಿ ಇಟ್ಟ ಗಂಧದ ಮುದ್ದೆಯಿಂದ ಗಂಧವನ್ನು ತೆಗೆದು ನೀರುಬೆರಸಿ ಆಕೆಯ ಮುಖಕ್ಕೆ ಬಲವಾಗಿ ಹೊಡೆದನು. ಕಣ್ಣು ಉರಿಜ್ವಾಲೆಗೊಂಡು, "ಅಯ್ಯೋ" ಎಂದ ಸೀತುವನ್ನು ಎರಡು ಮೂರು ಮಂದಿ ಬಲವಾಗಿ ಹಿಡಿದು, "ಬಿಡುಬಾಯಿ; ಬೇಗ ಹೇಳು; ಕೈಸುಡಿಸಿಕೊಳ್ಳಬೇಡ!" ಎಂದು ಬೊಬ್ಬೆಹೊಡೆಯುತ್ತಾ ಎಳೆದಾಟ ಸೆಳೆ ದಾಟಗಳಿಗೆ ಪ್ರಾರಂಭಿಸಿದರು.

"ಎಲ್ಲರೂ ಕೈಬಿಡಿ; ದೂರನಿಲ್ಲಿ, ಅದಕ್ಕೊಂದು ದಾರಿತೋರಿಸುತ್ತೇನೆ" ಎಂದು ಹೇಳುತ್ತಾ, ಕೈಕಟ್ಟಿ ತನ್ನ ಮುಂದೆ ಅಡಿಮೇರೆ ಹಾಕಿ ನಿಂತು ಕೊಂಡಿದ್ದ ಸೀತುವನ್ನು ನೋಡಿ ಆರ್ಭಟಿಸಿ, "ಯಾರು ನೀನು? ಶರಣು ಹೋಗು!" ಎಂದು ಪಾತ್ರಿಯು ಪ್ರಶ್ನಿಸಿದನು. ಮುಖಕ್ಕೆ ಕೈಯಿಟ್ಟು

"ನಾನು ತುಂಬೆ; ತಮ್ಮ ಅಪ್ಪಣೆಯಂತೆಯೇ ಈ ಪ್ರಾಣಿಯನ್ನು ಹಿಡಿದಿಟ್ಟೇನೆ. ನನ್ನ ತಂಗಿಯು ಮದುವೆ ಅನ್ನಾಹಾರಗಳಿಲ್ಲದೆ ನರಳುತ್ತಿದ್ದಾಳೆ. ದಾರಿ ತೋರಿಸಿರಿ–ನಾನು ಹೋಗುತ್ತೇನೆ." ಎಂಬ ಮಾತು ಸೀತುವಿನ ಬಾಯಿಯಿಂದ ಹೊರಡುತ್ತಲೇ ಎಲ್ಲರೂ ಸಂತೋಷಗೊಂಡು, ಸೀಯಾಳ ಕೊಯ್ದು ಆಕೆಗೆ ಕೊಟ್ಟರು. ತುಂಬಾ ದಣಿದಂತೆ ಮಾಲುತ್ತಾ ಮುದಿತಂದೆಯ ಕೈಹಿಡಿದು ಮನೆಕಡೆಗೆ ಸೀತುವು ನಡೆದಳು.

ಈ ರೀತಿ ಹಲವು ಪ್ರೇತಗಳಿಗೆ ದಾರಿತೋರಿಸಿ, ಹರಕೆಪಡೆದು, ನಿವೃತ್ತಿಹೇಳಿ ಮಧ್ಯಾಹ್ನ ಒಂದುಘಂಟೆಗೆ ದರ್ಶನ ಮುಗಿಯಿತು.

X X X X

ಹದಿನೈದುದಿವಸಗಳ ಪುರುಸತ್ತಿಲ್ಲಿ 'ದೊಡ್ಡ ಬಲಿ'ತೆಗೆಯಬೇಕೆಂದೂ, ಸೀತುವಿನ ಸತ್ತ ಮಗಳು ತುಂಬೆಯು ತೀರಿಹೋದ ತಂಗಿಗೆ, ಸಮಪ್ರಾಯದ ಗಂಡುಪ್ರೇತದೊಡನೆ ನಾಲ್ಕಾರು ರೂಪಾಯಿ ಖರ್ಚುಮಾಡಿ ಮದುವೆಯಾಗಬೇಕೆಂದೂ, ಆ ವಿಷಯವನ್ನು ಸೀತುವೇ ಸ್ವತಃ ತನ್ನ ತಾಯಿಮನೆಗೆ ಹೋಗಿ ತಿಳಿಸಿ ಅವರನ್ನು ಕರೆತರಬೇಕೆಂದೂ ಬಾಬಯ್ಯ ಪಾತ್ರಿಯು ಹೊರಟುಹೋಗುವ ಮೊದಲೇ ತಿಳಿಸಿದ್ದನು. ಮರುದಿನವೇ ಸೀತುವೂ ತಾಯಿಮನೆಗೆಂದು ಹೋಗಿಬಿಟ್ಟಳು. ಕೆಲದಿವಸ ಆರ ಹೇತುವೂ ಇದ್ದಿಲ್ಲ; ಕಾರಣ ಕೂಡಲೇ ನಿವೃತ್ತಿಗೊಳಿಸುವೆನೆಂದು ಎರಡು ಹುಂಜಗಳನ್ನೂ, ಎರಡು ಕಂಚಿನ ಬಟ್ಲು (ಬೇರೆ ನಗನಾಣ್ಯಗಳಿದ್ದಿಲ್ಲ) ಜಾವಿಗಾನಿಗೆ ತೆಗೆದಿಟ್ಟಿದ್ದರು.

X X X X

ಇಂದು ಭಾರೀ ಗೌಜಿ! ಕಾಲುಕಟ್ಟಿಹಾಕಿದ ಕೋಳಿಗಳ ಚೀರಾಟವು, ಹಟ್ಟಿಯಲ್ಲಿ ಹೊಟ್ಟೆಗಿಲ್ಲದೆ ಅರಚುತ್ತಿದ್ದ ಎತ್ತುಕೋಣಗಳ ನೆನವರಿಕೆಯನ್ನೂ ತಪ್ಪಿಸಿತ್ತು. ಅರಸಿನದ, ಮಸಿಯ ಪುಡಿಗಳನ್ನು ತಯಾರಿಸುವುದರಲ್ಲಿಯೂ, ಅರಳನ್ನು ಹೆಕ್ಕುವುದರಲ್ಲಿಯೂ, ಅಡಿಗೆ ತಯಾರಿಸುವುದರಲ್ಲಿಯೂ ಹೆಂಗುಸರಿಗೆ ಬಿಡುವೇ ಇಲ್ಲ ಹುಡುಗರು ಮನೆ ಯಜಮಾನರ ಗೌಜಿಗೆ ಕಂಗಾಲಾಗಿದ್ದರು. ಹೊತ್ತು ಮುಳುಗುವ ಸಮಯಕ್ಕೆ

ಬಾಬಯ್ಯ ಪಾತ್ರಿಯೂ ಇನ್ನಿಬ್ಬರೂ ದೊಡ್ಡ ಗಂಟುಮೂಟೆಯೊಂದಿಗೆ ಸೀತುನ ಮನೆಗೆ ಬಂದರು. 'ಬಲಿ' ತೆಗೆಯಲು ಆರಂಭವಾಯಿತು.

ದೊಡ್ಡ ಕಾಲ್ಮಣೆಯ ಮೇಲೆ ಎದುರಲ್ಲಿ ಕೂತಿದ್ದ ಸೀತುವನ್ನು ಎರಡೂ ಭುಜಗಳಲ್ಲಿಯೂ ಅಲುಗಾಡದಂತೆ ಹಿಡಿದಿದ್ದರು. ಬಾಬಯ್ಯನು ಏನನ್ನೋ 'ಮಣಮಣ' ಹೇಳುತ್ತಾ, ಅರಳನ್ನು ಚೆಲ್ಲುತ್ತಾ, ನಾಲ್ಕು ಮೂಲೆಯ ನಾಲ್ಕು ಕರಿಕೋಳಿಗಳನ್ನು ಚಿತ್ರಹಿಂಸೆಯಿತ್ತು ಪೀಡಿಸುತ್ತಾ ಇದ್ದನು. ಅನ್ನದ ರಾಶಿಯೂ, ಪಲ್ಯದ ಒಗ್ಗರಣೆಯೂ, ರೊಟ್ಟಿಯ ಮೂಟೆಯೂ ನಿಷ್ಪ್ರಯೋಜನವಾಗಿ ಹೋಗುತ್ತವಲ್ಲಾ ಎಂದು ಸುತ್ತಲೂ ನಿಂತಿದ್ದ ಮಕ್ಕಳೂ, ಬೆಕ್ಕು ನಾಯಿಗಳೂ ನಿರಾಶೆಗೊಂಡು ನೆಲದ ಮೇಲೆ ಕೂತುಬಿಟ್ಟಿದ್ದುವು.

ಹೊರಗಿಂದ ನಾಯಿ ಕೂಗಿತು. 'ಬೇಗ್ ಬೆಡ್ಡಿಂಗ್'ಗಳನ್ನು ಒಬ್ಬ ಆಳಿನಿಂದ ಹಿಡಿಸಿಕೊಂಡು ಸೀತುವಿನ ಮೂರನೇ ಮಗ, ಸುಂದರನು, ನಾಲ್ಕೈದು ವರ್ಷಗಳಿಂದಲೂ ಬೊಂಬಾಯಿಯಲ್ಲಿಯೇ ಕೆಲಸದಲ್ಲಿ ಇದ್ದವನು ಒಳಬಂದನು. ಈ 'ದೊಡ್ಡ ಬಲಿ'ಯ ಗೌಜಿಯಲ್ಲಿ ಸುಂದರನ ಬರೋಣವೊಂದು ಗಣನೀಯವಾಗಲಿಲ್ಲ. ಅಂತೆಯೇ ಅವನೂ ಈ ಎಲ್ಲಾ ಪಿಕಲಾಟಗಳನ್ನು ಫಕ್ಕನೆ ನೋಡಿ ಅಲ್ಲೇ ನಿಂತುಬಿಟ್ಟನು. ಒಂದೆಡೆ "ದಮ್ಮಯ್ಯ ಬಿಡಿರಿ; ಹೇಳುತ್ತೇನೆ; ಬಾಯಿಬಿಡುತ್ತೇನೆ" ಎಂದು ಕೂಗುತ್ತಿದ್ದ ತಾಯಿಯನ್ನೂ, ಇನ್ನೊಂದೆಡೆ ಕಣ್ಣೆರಳಿಸಿಕೊಂಡು, ಮೇಲಕ್ಕೆ ದಿಟ್ಟಿಸುತ್ತಾ, "ಸರಿ, ಅದೇ ತುಂಬೆಯಿರಾಕೆ! ಗತಿಯಿಲ್ಲದೆ ತಾಯಿಯನ್ನು ನೆನೆನೆನೆದು ಅಪಸ್ಮಾರವಾಗಿ ಮಲಬಾರಿನಲ್ಲಿ ಗಂಡನ ಬಳಿ ತೀರಿಹೋದಳು. ಈಗ ಆ ಪ್ರೇತವು ತೃಷೆಯಿಂದ ಕಂಗೆಟ್ಟುಹೋಗಿದೆ,-ಇರಲಿ ಸರಿಮಾಡುವ!" ಎಂದು ನಿರ್ಲಕ್ಷವಾಗಿ ಹರಟುತ್ತಿದ್ದ ಬಾಬಯ್ಯನನ್ನೂ ನೋಡಿ ಸುಂದರನಿಗೆ ಸಿಟ್ಟು ತಲೆಗಡರಿತು. ಆದರೂ ಸಂಪೂರ್ಣ ವೇಷವು ಹೊರಬರಲೆಂದು ಸುಮ್ಮಗಿದ್ದನು. ಪಾತ್ರಿಯು ಮುಂಬರಿದು, "ವಸ್ತ್ರ ರವಕೆ, ಕೈ-ಕಾಲುಂಗುರಗಳನ್ನು ಈಚೆಗಿಡಿರಿ, ತುಂಬೆಯ ತಂಗಿಯ ಪ್ರೇತಕ್ಕೂ ಒಂದು ದಾರಿ ತೋರಿಸುವ, ಸೀತುವಿನ ಅಣ್ಣನ ಮಗನು ಎಂದೋ ತೀರಿ

ಹೋದವನಿಗೂ, ಅದಕ್ಕೂ ವಿಧಿಪ್ರಕಾರ ಮದುವೆಮಾಡಿ ಗತಿಹೊಂದಿಸುವ," ಎಂದು ಹೇಳಿ ಏನೇನೋ ಮಾಡಿದನು. ಸುಂದರನ ತಲೆ ತಿರುಗಿದಂತಾಯಿತು, ಮತ್ತೂ ಸಹಿಸಿಕೊಂಡನು.

X X X X

ಅರ್ಧಮುಡಿ ಅಕ್ಕಿಯ ಅನ್ನದ ರಾಶಿಯಮೇಲೆ ಒಂದು ದೊಡ್ಡ ಮಡ್ಲಿನ (ತೆಂಗಿನ ಸೋಗೆ) ದೊಂದಿಯನ್ನು ಬಲವಾಗಿ ಊರಿಟ್ಟನು. ಬಾಯಲ್ಲಿ ಪಾತ್ರಿಯು ಮಂತ್ರ ಹೇಳುತ್ತಿದ್ದಂತೆಯೇ, ಅರಳು ಬಿಸಾಡುತ್ತಿದ್ದಂತೆಯೇ, ಆ ದೊಡ್ಡ ದೊಂದಿಯು ತನ್ನಷ್ಟಕ್ಕೇ ಅಲುಗಾಡಲಾರಂಭಿಸಿತು. ಎಲ್ಲರೂ ಬೆಚ್ಚಿಬೆರಗಾದರು ಪ್ರೇತವು ಸೀತುವನ್ನು ಬಿಟ್ಟು ದೊಂದಿಯಲ್ಲಿ ಐಕ್ಯವಾಯಿತೆಂದೂ, ಇನ್ನು ಭೀತಿಯಿಲ್ಲವೆಂದೂ ಎಲ್ಲರೂ ವಿಸ್ಮಯಾನಂದದಿಂದ ಕೂಡಿದರು.

ಸುಂದರನು ಕಿಡಿಕಿಡಿಯಾದನು. ಯಾರನ್ನೂ ಗಣಿಸದೆ ಅವನು ಮುಂದೆ ಧಾವಿಸಿ, ದೊಂದಿಯನ್ನು ಹಿಡಿದೆಳೆದು ಬಲವಾಗಿ ಬಾಬಯ್ಯನ ಮುಖದ ಮೇಲೆ ಎಸೆದನು. ದೊಂದಿಯ ಕಟ್ಟುಗಳು ಸಡಿಲಾಗಿ ಕೆಳಗೆ ಬಿದ್ದುವು. ಅರೆಬೆಂದ ದೊಡ್ಡ ಕಪ್ಪೆಯೊಂದು ಆ ದೊಂದಿಯೊಳಗಿಂದ ಹೊರಬಿದ್ದು ಪೇಚಾಟಪಡುತ್ತಿತ್ತು. ಅಲ್ಲಿದ್ದವರು ತಮ್ಮ ಕಣ್ಣುಗಳನ್ನೇ ನಂಬದಾದರು. ಪಾತ್ರಿಯ ಕಡೆಗಿದ್ದ ಅವರ ದೃಷ್ಟಿಯು ಸುಂದರನ ಕಡೆಗೆ ಹರಿಯಿತು. ಸುಂದರನು ದೊಡ್ಡ ವ್ಯಾಖ್ಯಾನಕ್ಕೆ ತೊಡಗಿದನು. ತಾನು ಬೊಂಬಾಯಿಯಿಂದ ಹೊರಟು ರೈಲಿನಲ್ಲೇ ಮಲಬಾರಿನಲ್ಲಿದ್ದ ತನ್ನ ಅಕ್ಕ ತುಂಬೆಯಿದ್ದಲ್ಲಿಗೂ ಹೋಗಿ, ಅವಳ ಯೋಗಕ್ಷೇಮಗಳನ್ನು ತಿಳಕೊಂಡು ಬಂದಿರುವೆನೆಂದೂ, ಅವಳು ತುಂಬಿದ ಗರ್ಭಿಣಿಯೆಂದೂ, ಅಲ್ಲಿಂದ ತಾನು ಹೊರಟು ಇನ್ನೂ ಒಂದು ಹಪ್ತೆಯೂ ಆಗಲಿಲ್ಲವೆಂದೂ ಹೇಳಿ, ಭಾವನು ಕೊಟ್ಟ ಕೈಕಾಗದವನ್ನೂ ತೋರಿಸಿದನು. ಸಿಟ್ಟಿನಿಂದ ಸಿಡಿದ ಆ ನಾಗರಿಗ ಯುವಕನು ತನ್ನ ಸೊಂಟದ 'ಬೆಲ್ಟ'ನ್ನು ತಪ್ಪಿಸಿ ಪವಿತ್ರ ಪಾತ್ರಿಯ ಕಡೆಗೆ ತಿರುಗಿ ನೋಡಿದಾಗ ಅಲ್ಲಿ ಪಾತ್ರಿಯಾಗಲೀ, ತಾಯಿ ಸೀತುವಾಗಲೀ ಇರಲಿಲ್ಲ.

# ಹಳ್ಳಿಗರ ಅಂಧಶ್ರದ್ಧೆ

(ಬರೆದವ:—ಯಂ ವಿ. ಹೆಗ್ಡೆ)

---

ಒಂದೂದೇಶದ ಮುಖ್ಯಾಂಗವು ಹಳ್ಳಿ. ಆ ಹಳ್ಳಿಯಲ್ಲಿರುವುದು ಮಣ್ಣಿನೊಡನೆ ಹೋರಾಡಿ ಅನ್ನವುಣ್ಣುವ ರೈತ. ರೈತನು ಈ ಮಣ್ಣಾಟ ಮಾಡುವುದರಿಂದಲೇ ಮಿಕ್ಕವರು ಉಂಡಾಟವಾಡಲು ಸಾಧ್ಯವಾಗಿದೆ. ಹೀಗೆ ದೇಶದ ಸಂಪತ್ತಿನ ಉಗಮಸ್ಥಾನವಾದ ರೈತನ ಅವಸ್ಥೆ ಹೇಗಿದೆ ಬಲ್ಲಿರಾ? ಆತನು ಪ್ರತಿದಿನ ಬೆಳಿಗ್ಗಿನ ಗಂಜಿಯನ್ನು ಸಾಯಂಕಾಲದೊಳಗೆ ಕರಗಿಸುವ ಅಗ್ನಿದೇವನನ್ನು ಶಪಿಸುತ್ತಾ ಇದ್ದಾನೆ. ಇದೇನು ಹೀಗೆ? ಆ ಸಂಪತ್ತಿಗೇಕೆ ತನ್ನ ಜನಕನನ್ನು ಬಿಟ್ಟುಹೋಗುವಷ್ಟರ ಕೃತಘ್ನತೆ? ಇದಕ್ಕೆ ಕಾರಣವಿದೆ. ನಮ್ಮ ಅನುದಿನದ ಉಪಯೋಗಕ್ಕೆ ಬೇಕಾಗುವ ಸಾಮಾನುಗಳನ್ನು ತಯಾರಿಸುವ ಯಂತ್ರಗಳನ್ನು ನೋಡಿರಿ—ಅವು ಬಗೆ ಬಗೆಯ ವಸ್ತುಗಳನ್ನೇನೋ ನಮಗೊದಗಿಸಿ ಕೊಡುತ್ತವೆ—ಅವಾಗಿ ಅನುಭವಿಸುವುದಿದೆಯೇ? ಇಲ್ಲ;ಅದೇಕೆ?ಅವುಗಳಲ್ಲಿರುವುದು ಈ ಸಾಮಾನುಗಳನ್ನು ತಯಾರಿಸಿ ಕೊಡುವಷ್ಟೇ ಜೀವ. ಅದರಲ್ಲಿ ಅವುಗಳನ್ನನುಭವಿಸುವ ಶಕ್ತಿಯು ಅಡಗಿಕೊಂಡಿಲ್ಲ. ಆದ್ದರಿಂದಲೇ ಯಂತ್ರಗಳು ವಸ್ತುಸುಖವನ್ನು ಹೊಂದಲಾರವು. ಮಾನವನಾದರೇನು? ಆತನಲ್ಲಿಯೂ ಉಂಟುಮಾಡುವ ಶಕ್ತಿಮಾತ್ರವಿದ್ದು ಉಣ್ಣುವ ಗುಣವಿಲ್ಲದೆ ಹೋದರೆ ಅವನನ್ನೂ ಯಂತ್ರಗಳ ಸಾಲಿಗೇ ಸೇರಿಸಬಹುದು. ನಮ್ಮ ಹಳ್ಳಿಗರ ಅವಸ್ಥೆಯಾದರೂ ಈಗ ಇದೇ ಆಗಿದೆ. ದಿನವಿಡೀ ಬೆವರು ಸುರಿಸಿ ಗೇಯುವ ರೈತನು, ಆದರ ಪ್ರತಿಫಲವನ್ನನುಭವಿಸುವ ರೀತಿಯನ್ನರಿಯದ ದೆಸೆಯಿಂದ, ಇಂದು ಆ ಉಣ್ಣುವ ಕೆಲಸವನ್ನು ಬೇರೆಯವರಿಗೆ ಬಿಟ್ಟುಕೊಟ್ಟಿದ್ದಾನೆ. ಅತ್ಯಂತ ಶೋಚನೀಯ ವಿಷಯವೆಂದರೆ ರೈತರ ದೀನಾವಸ್ಥೆ! ಅವರ ದುಡಿಮೆಯ ಫಲವನ್ನುಂಡುದಕ್ಕಾಗಿ ಕೃತಜ್ಞತೆಯನ್ನರ್ಪಿಸುವರಾರೂ ಲೋಕದಲ್ಲಿಲ್ಲ. ಕಾರಣವಿಷ್ಟೆ; ಅವರು ಸುರಿಸುವ ಬೆವರಿನ ಇಷ್ಟುದೊಡ್ಡ ಕಾಲುವೆಯು,

ಅವರ ಹೊಟ್ಟೆಯ ಹೆಸರು ಹೇಳಿಯೇ ಹರಿಯುತ್ತಿದೆ; ಮಾತ್ರವಲ್ಲ--ಹೊಟ್ಟೆಗಾಗಿಯೇ ದಿನಂಪ್ರತಿ ಕಣ್ಣೀರ ಕಾಲಿವೆಯೂ ಇದಕ್ಕೇ ಸಂಗಮವಾಗುತ್ತಿದೆ. ಅದ್ಭುತವೆಂದರೆ ಇದೀಗ! ಹಳ್ಳಿಗರು ಶಪಿಸುತ್ತಿರುವುದೂ ತಮ್ಮ ಹೊಟ್ಟೆಯನ್ನೇ! ಅಂದರೇನು ರೈತರ ಹೊಟ್ಟೆಯೇ ಬಹ್ಮಾಂಡವೆ? ವಸ್ತುಸ್ಥಿತಿಯು ಹಾಗಲ್ಲವಾದರೂ ಹಳ್ಳಿಗರಿಗೆ ಮಾತ್ರ ಹಾಗೆಯೇ ಆಗಿದೆ. ಅಜ್ಞಾನೀ ಹಳ್ಳಿಗರ ದೃಷ್ಟಿಗೆ ತಮ್ಮ ಕೆಲಸ ಮತ್ತು ಹೊಟ್ಟೆ ಇವೆರಡೇ ಕಂಡು ಬರುತ್ತಿವೆ. ಇವೆರಡರ ಮಧ್ಯಕ್ಕೆ, ಆಧುನಿಕ ನಾಗರೀಕತೆಯಿಂದಾಗಿ ಅಡಚಣೆಗೊಳಗಾದ ಪ್ರಪಂಚದ ಸುಲಿಗೆಯ ಕೈಯೊಂದು ನೀಡಿಕೊಂಡಿದೆ ಎಂಬುದನ್ನು ಪಾಪದ ಹಳ್ಳಿಗರರಿಯರು. ಅವರ ಮನೋರಾಜ್ಯಕ್ಕೆ ಹೊರಗಾದ ಇಂದ್ರಜಾಲ ವಿದ್ಯೆಯಾಗಿಯೇ ಈ ಉದ್ಯೋಗವು ನಡೆಯುತ್ತಿದೆ. ಇದರ ನಿವಾರಣೆಯೆಂಬುದಂತೂ ಸಂಬಂಧವಿಲ್ಲದ ಸಂಗತಿ. ಹೀಗಾಗಿ ಹಳ್ಳಿಗರು ಈ ಸಂಕಷ್ಟನಿವಾರಣೆಮಾಡಿಕೊಳ್ಳುವದೆಂದರೆ ಅನುಭವಿಸಿಯೇ-ಇಂದಿನ ಅವರ ಹೋರಾಟದ ಸಾಮಗ್ರಿಗಳೆಂದರೆ, ಧೈರ್ಯ ಸಾಹಸಗಳಲ್ಲ, ಯುಕ್ತಿ ಪ್ರಯುಕ್ತಿಗಳಲ್ಲ; ಒಳಗಿಂದೊಳಗೆ ಅಳುತ್ತಾ ಎಲ್ಲವನ್ನೂ ತಾಳಿಕೊಳ್ಳುವ ತಾಳ್ಮೆ! ಹಳ್ಳಿಗರ ಹೃದಯದ ಎಲ್ಲಾ ಭಾಗದಲ್ಲಿಯೂ ಇಂತಹ ದೌರ್ಬಲ್ಯವೇ ನೆಲಸಿದೆ. ಇದನ್ನಾಳುವವೆಂದು ಸಕಲ ಜಾತಿಯ ದರ್ಪಗಳೂ ಮುಂದಾಗುವುದರಲ್ಲಿ ಆಶ್ಚರ್ಯವೇನು? ಜಾಗ್ರತಿ ಹೊಂದಿದ ಯಾವ ರಾಷ್ಟ್ರಕ್ಕೂ ಬೇಡವಾದ ಅಂಧಶ್ರದ್ಧೆಗಳಿಗೆ ನಮ್ಮ ಹಳ್ಳಿಗಳ ಆಶ್ರಯ ಪೋಷಣೆ!

## ಸೈನ್ಯ ಮತ್ತು ದೈವ ದೇವರು

ಅಂತೂ ಹಳ್ಳಿಯ ಸಂಪತ್ತು, ಹಳ್ಳಿಗರ ಅಜ್ಞಾನದ ದೆಸೆಯಿಂದಲೇ ಅನ್ಯರ ಬೊಕ್ಕಸ ಸೇರುವುದೆಂದು ಹೇಳಿದಂತಾಯಿತು. ಇಲ್ಲಿ ನಮ್ಮ ಆಕ್ಷೇಪವು ತಮ್ಮ ಸಂಪತ್ತನ್ನು ಅನ್ಯರೆಡೆಗೆ ರವಾನಿಸುವ ಚುರುಕನ್ನು ಹಳ್ಳಿಗರು ತೋರಿಸಬಾರದೆಂದಲ್ಲ. ಯಾವ ಕೆಲಸಕ್ಕೂ ಅಲ್ಲದೆ ಕೇವಲ ಪರಕೀಯ ಸಿರಿಯನ್ನು ತಿಂದು ಜೀರ್ಣಿಸುವುದಕ್ಕಾಗಿಯೇ ಬದುಕಿರುವ ಕೆಲವು ಅಂಥ

ಪದ್ಧತಿಗಳ ಬಾಯಿಗೆ ಹೋಗಿ ಬೀಳುವದಲ್ಲಾ, ಎಂದೇ ನಮ್ಮ ಪಶ್ಚಾತ್ತಾಪ. ಹೀಗೆ ಹಳ್ಳಿಗರ ಸರ್ವವನ್ನೂ ನುಂಗುವಷ್ಟು ಬಲವಾಗಿರುವ ಎರಡು ದೊಡ್ಡ ಬಾಯಿಗಳೆಂದರೆ ಸೈನ್ಯ ಮತ್ತು ದೇವರು. ಹಳ್ಳಿಗರು ತಿಂದು ಉಣ್ಣುವುದಕ್ಕೂ ಹೆಚ್ಚಿನದನ್ನು ತೀರ್ವೆಗಾಗಿ ತೆರುತ್ತಿರುವರಷ್ಟೆ. ಇದರಲ್ಲಿ ಅರ್ಧಕ್ಕೂ ಮಿಕ್ಕಿದ ಅಂಶವು ಸೈನ್ಯಕ್ಕಾಗಿ ಖರ್ಚಾಗುತ್ತಿದೆ. ಇದರ ಉಚಿತಾನುಚಿತತೆಯನ್ನು ವಿಮರ್ಶಿಸುವುದಂತಿರಲಿ; ಸೈನ್ಯವೆಂದರೇನು-ಅದೇಕಿರುವುದು ಎಂಬುದಾದರೂ ಗೊತ್ತಿರುವ ಹಳ್ಳಿಗರೆಷ್ಟು? 'ತೀರ್ವೆ ತೆರಲೇಬೇಕು' ಎಂಬ ಕಾನೂನ್, ಹಳ್ಳಿಗರ ಮನೆಮಾರು, ಹೊಲಗದ್ದೆ ಗಳನ್ನಾದರೂ ಒತ್ತೆ ಹಾಕಿಸಿ ತೆರಿಗೆ ತುಂಬಿಸಿಕೊಳ್ಳುತ್ತಿದೆ, ಇಷ್ಟೇ ಅಲ್ಲದೆ ಅಲ್ಲಿಯಾದರೂ ರೈತರ ಕೆಲಸವೇನುಂಟು ಪಾಪ! ಕಾನೂನು, ಪದ್ಧತಿ-ಇವೆರಡೇ ಇಂದು ಹಳ್ಳಿಯಲ್ಲಿ ಕಾರಸ್ಥಾನವನ್ನು ನಡೆಸುತ್ತಿವೆ. ಕಾನೂನು ತಿಂದುಳಿದ ಅಂಶಕ್ಕಾಗಿ ಪದ್ಧತಿಯು ಕಾದಿದೆ. ಆರುಮಂದಿ ಮೆಂಬರರು ಬದುಕಿರುವ ಕುಟುಂಬದಲ್ಲಿ, ಹದಿನಾರು ಮಂದಿ ಭೂತಪ್ರೇತ ಗಳಿಗಾದರೂ ಆರಾಧನೆ ನಡೆಯಲೇ ಬೇಕು ಹಳ್ಳೀ ಕುಟುಂಬದಲ್ಲಿ ಒಬ್ಬನು ಸಾಯುವುದೆಂದರೆ, ಪ್ರೇತವಾಗಿ ಕೆಲಸಮಾಡದೆ ಉಣ್ಣುವಷ್ಟು ಬಲಶಾಲಿಯಾಗುವುದೆಂದೇ ಅರ್ಥ! ಅವರಿಗೂ ಆಗಾಗ ಅನ್ನವಸ್ತ್ರಗಳನ್ನು ಕೊಡುತ್ತಲೇ ಇರಬೇಕು. ಪ್ರೇತಗಳು ಈ ಅನ್ನವಸ್ತ್ರಕ್ಕಾಗಿ ಹೊಲಗದ್ದೆ ಗಳಲ್ಲಿ ಕೆಲಸಮಾಡುತ್ತಿದ್ದರೆ ನಷ್ಟವಿಲ್ಲ-ಅವುಗಳ ಕೆಲಸವೆಲ್ಲಾ ಕುಟುಂಬಿ ಕರ ಮೇಲೆ-ಹಟ್ಟಿಯ ದನಕರುಗಳ ಮೇಲೆ! ಇನ್ನು ಭೂತಗಳ ಕೋಲ-ನಾಗ ಸಮಾರಾಧನೆ, ತುಳಸೀ ಪೂಜೆ, ತಿರುಪತಿ ಮುಡಿಪು, ತೀರ್ಥಯಾತ್ರೆ ಮಾಟ, ಬಲಿ, ಹಟ್ಟಿಹರಕೆಯೆಂದೆಲ್ಲಾ ಹಳ್ಳಿಗಳಲ್ಲಿ ವ್ಯಯವಾಗುವ ಹಣವೆಷ್ಟು? ಹಸಿವಿನಿಂದ ಸಾಯುವ ಹೆದರಿಕೆ ಹಿಡಿದಿರುವ, ಹಳ್ಳಿಗರನ್ನು ಭೂತಪ್ರೇತಗಳೂ ಹೆದರಿಸುತ್ತವೆ–'ನಾವು ಕೊಲ್ಲುತ್ತೇವೆ' ಎಂದು! ಹೀಗಾಗಿ ಕ್ಷಣಕ್ಷಣವೂ ಸಾಯುತ್ತಿದ್ದಾರೆ ಪಾಪದ ಹಳ್ಳಿಗರು! ಅವರಲ್ಲಿ ಪೌರುಷ ವೆಷ್ಟಿದ್ದೀತು! ಧೈರ್ಯ ಸಾಹಸವು ಹೇಗಿರಬೇಕು?

# — ಕಲ್ಪನೆಗಾಗಿ ಸರ್ವಸ್ವ! —

ನಾವೀಗ ರೈತರ ಬೆವರಿನಿಂದ ಹುಟ್ಟುವ ಸಂಪತ್ತಿನ ಬೆನ್ನುಹಿಡಿದು ಬಂದವರು ಭೂತ ಪ್ರೇತಗಳ ಸಾಲನ್ನೇ ಸೇರಿದೆವು!! ಇನ್ನು ಆ ಭೂತ ಪ್ರೇತಗಳೆಂದರೇನು? ಎಂಬುದನ್ನು ಒಂದಿಷ್ಟು ಯೋಚಿಸೋಣ. ಇದೇ ಪ್ರಶ್ನೆಯನ್ನು ದೈವಾರಾಧಕ ಹಳ್ಳಿಗನೊಬ್ಬನಿಗೆ ಕೇಳುವುದಾದರೆ ಆತನು ಕೆಲವು ವಿಲಕ್ಷಣ ಆಕಾರವನ್ನು ಬಾಯಲ್ಲೇ ಆಡಿ ತೋರಿಸಿ, ಅವು ಭೂತ ಗಳೆಂದು ನಮ್ಮನ್ನು ಹೆದರಿಸಿಬಿಡಬಲ್ಲನು. ಗೋಳಿಮರದ ಎಲೆ ಅಲ ಗಾಡುವಾಗ ಮಾವಿನ ಮರದ ನೆರಳು ಮನುಷ್ಯಾಕಾರದಲ್ಲಿ ಬೀಳುವಾಗ- ಎತ್ತರದಿಂದ ಕಲ್ಲು ಜಾರುವಾಗ—ತರಗೆಲೆ ಶಬ್ದಮಾಡುವಾಗ—ಭೂತ ಪ್ರೇತಗಳು ಕೆಲಸ ಮಾಡುತ್ತಿವೆ ಎಂದು ತಿಳಿದುಕೊಂಡರಾಯಿತು! ಭೂತಗಳು ಈ ಕೆಲಸವನ್ನು ತನ್ನ ವಿರುದ್ಧವಾಗಿ ಮಾಡುವಾಗ, ದಾರಿ ಹೋಕನ ಕರುಳೇ ನಡುಗುವುದು; ಮನೆಗೆ ಹೋದವನಿಗೆ ಹೆದರಿಕೆ ಯಿಂದಲೇ ಜ್ವರ ಹತ್ತುವದು. ಆತನು ವಿಲಕ್ಷಣವಾಗಿ ಅರಚುವನು— ಏನೇನೋ ಹೇಳುವನು ಈ ವಿಪರೀತವು ಉಪದ್ರದಿಂದಲ್ಲದೆ ಅನ್ಯಥಾ ಅಲ್ಲವೆಂದು ದೃಢಮಾಡಿಕೊಂಡು ಕೂಡಲೇ, ಹರಕೆ, ದರ್ಶನ—ಬಲಿ, ಕಾಣಿಕೆ ನಡೆಯುವುದು. ಭೂತವು ಸಮಾಧಾನಗೊಂಡಿರಬೇಕೆಂದು ಇದನ್ನೆಲ್ಲಾ ಕಂಡ ರೋಗಿಗೆ ಸಮಾಧಾನ ಬಂದರೆ ಸರಿ—ರೋಗವು ತನ್ನಂತೆ,—ಅಥವಾ ಔಷಧದಿಂದ—ಬಿಟ್ಟು ಹೋಗುವದು. ಈ ರೋಗ ಮತ್ತು ರೋಗವಾಸಿಯ ಕಾರಣ—ಇವಿಷ್ಟೇ ಒಂದು ಅಂಟುರೋಗದಂತೆ ಬಾಯಿಂದ ಬಾಯಿಗೆ ಹರಡಿ, ಇಂಥಾ ಅಂಧಶ್ರದ್ಧೆಯು ಇನ್ನಷ್ಟು ಬಲ ಗೊಳ್ಳುವದು. ಈದಿನ ಹಳ್ಳಿಗಳಲ್ಲಿ ಸಾರ್ವತ್ರಿಕವಾಗಿ ಹಬ್ಬಿರುವ ಭಯಕ್ಕೆ ಬೇರಾವ ಆಧಾರವೂ ಇರಲಾರದು. ಒಂದು ತರಗೆಲೆಯಾಗಲೀ ಒಂದು ಮರದ ನೆರಳಾಗಲೀ, ಮನಿದು ಮಾಡುವಂಥಾ ಅದ್ಭುತಗಳಿವೆ! ಭೂತಪ್ರೇತಗಳಿಗೆ ಇಲ್ಲದ ಅಸ್ತಿತ್ವವನ್ನು ಕೊಟ್ಟು, ಅವುಗಳ ಮೇಲೆ ಬೇಕೆಂದೇ ಮಹಾಶಕ್ತಿಯ ಕೀರ್ತಿಯನ್ನು ಹೊರಿಸಿ, ಈ ಅರ್ಥರಹಿತ

ಕಲ್ಪನೆಯಿಂದ ಮನುಷ್ಯನ ಶಕ್ತಿಯನ್ನೇ ಕುಂದಿಸಿ, ಆತನನ್ನು ನಾಸ್ತಿ (ಏನೂ ಇಲ್ಲದ ಭ್ರಮೆ)ಯ ಗುಲಾಮನನ್ನಾಗಿರಿಸುವ ಅಮಾನುಷ ಪದ್ಧತಿಯನ್ನು ಎಷ್ಟೊಂದು ನಿಂದಿಸಿದರೂ ಸಾಲದು. ಈ ಕೆಲಸದ ತಲೆಯಿಂದ ಹಿಡಿದು ಬುಡದ ವರೆಗೆ ನೋಡಿದರೆ, ಜೀವಂತ ಮಾನವನ ವಿಚಾರ ದೃಷ್ಟಿಯು ಬಿದ್ದ ಚಿಹ್ನೆಯಾದರೂ ಕಂಡು ಬರುವ ಹಾಗುಂಟೇ? ಇಲ್ಲ. ಎಲ್ಲವೂ ಅಂಧಾನುಕರಣೆಯ ಫಲ, ಅವಿಚಾರೀ ದಾಸ್ಯಬುದ್ಧಿಯ ಪರಮಾವಧಿ! ಇದು ಚೇತನವನ್ನು ಕಳಕೊಂಡು ನಿದ್ರಿಸುತ್ತಿರುವ ಮಂಕುಬುದ್ಧಿಯ ಪರಿಣಾಮ; ಒಂದಿಷ್ಟು ಜೀವವಿದ್ದ ಬುದ್ಧಿಯನ್ನು ಈ ಹಳೇ ಪದ್ಧತಿಯು ಎತ್ತಿಕೊಂಡು ನಡೆಯುವುದೆಂದರೆ ಹೇಗದು?

## ಜೀವ ತುಂಬಬೇಕು!

ಹಳ್ಳಿಯ ಜೀವಮಾನವನ್ನು ಕೆಡಿಸುತ್ತಿರುವ ಈ ಅಂಧಶ್ರದ್ಧೆಯ ನಿವಾರಣೆಯಾಗದೆ, ಅಲ್ಲಿ ಚೇತನವು ಎಂದಿಗೂ ತೋರಿ ಬರಲಾರದು. ಈಗ ದೇಶದ ಸಾರ್ವಜನಿಕ ಕೆಲಸಗಾರರು ಹಳ್ಳಿಗಳ ಕಡೆಗೆ ದೃಷ್ಟಿ ಹರಿಸಿರುವ ಕಾಲ. ಈ ಜಾಗ್ರತಿಯನ್ನು ಸದುಪಯೋಗಮಾಡಿಕೊಳ್ಳಬೇಕಾದರೆ ಹಳ್ಳೀ ಸಂಸ್ಕೃತಿಯ ಪರಿಚಯವು ಅತ್ಯಗತ್ಯ. ಹಳ್ಳಿಗರಲ್ಲಿರುವ ಅಂಧಾನುಕರಣೆ—ಅದ್ಭುತ ಪ್ರೇಮ—ಈ ಸ್ವಭಾವಗಳು ತಮ್ಮ ಕಡೆಗೆ ಮಾಲುವಂತಹ ನಡತೆಯನ್ನು ಗ್ರಾಮ ಕೆಲಸಗಾರರು ತೋರಿಸದೆ ತಮ್ಮ ಕಾರ್ಯದಲ್ಲಿ ಜಯವನ್ನು ಸಂಪಾದಿಸಲಾರರು. ಹೀಗೆ ಗ್ರಾಮಗಳ ನಿಜವಾದ ಅಭಿವೃದ್ಧಿಯಾಗಬೇಕಾದರೆ ಕೆಲಸಗಾರರು ಅತ್ಯಂತ ಸೂಕ್ಷ್ಮಬುದ್ಧಿಯವರಾಗಿರಬೇಕು. ಹಳ್ಳೀ ಕೆಲಸವೆಂದರೆ ಹೆಣಕ್ಕೆ ಜೀವ ಬರಿಸುವ ಮಹಾ ಸಾಹಸ. ಅದಕ್ಕೆ ಆಡಂಬರಪ್ರೇಮ, ಕೀರ್ತಿಲಾಲಸೆ, ಇಷ್ಟಿದ್ದರೆ ಸಾಲದು; ಯಥಾರ್ಥವಾದ ಕಾರ್ಯೋಲ್ಲಾಸ, ತದೇಕ ನಿಷ್ಠೆಯೂ ಬೇಕು. ಭೂತ, ಪ್ರೇತ, ದೈವ, ದೇವರು—ಇವರೆಲ್ಲಾ ಹಳ್ಳಿಹಳ್ಳಿಗಳಲ್ಲಿ ಮಿಕ್ಕವರಷ್ಟೇ ಅಸ್ತಿತ್ವವನ್ನು ಪಡಕೊಂಡಿರುವರು. ಇದಕ್ಕೆ ಕಾರಣವು ಸ್ವತಂತ್ರಬುದ್ಧಿ—ತಿಳುವಳಿಕೆಯ ಮಟ್ಟಿಗೆ ಹಳ್ಳಿಗರೂ

ಸತ್ತು ಪ್ರೇತವಾಗಿರುವದೆ! ಹಳ್ಳಿಯ ಹಿತಸಾಧಕರು ಅವರಲ್ಲಿ ಜೀವವನ್ನು —ಅರ್ಥಾತ್ ಜ್ಞಾನವನ್ನು ತುಂಬಬೇಕು. ಇದಕ್ಕಾಗಿ ಅವಿಶ್ರಾಂತವಾಗಿ ದುಡಿಯುವ ಸಂಘಗಳು ಪ್ರತಿಯೊಂದು ಹಳ್ಳಿಯಲ್ಲೂ ಸ್ಥಾಪಿಸಲ್ಪಡ ಬೇಕು. ಈ ಸಂಘಗಳು, ದೈವ, ದೇವರೆಂಬ ಕಲ್ಪನೆಯನ್ನು ಕಾರ್ಯ ಮುಖೇನ ನಿವಾರಿಸಬೇಕು ಇದಕ್ಕಾಗಿ ಭಾಷಣ, ಒಡನಾಟ, ಸ್ನೇಹ ದಾಕ್ಷಿಣ್ಯಗಳ ಮೂಲಕ ಕೆಲವು ಧೀರರಿಂದ ಅಂಧಶ್ರದ್ಧೆಯ ಉಲ್ಲಂಘನೆ ಯನ್ನೂ ಮಾಡಿಸಿ, ಹಳ್ಳಿಗರ ಅಜ್ಞಾನವನ್ನು ಬೆಳಕಿಗೆ ಹಿಡಿಯಬೇಕು. ಹಳ್ಳಿಗಳಲ್ಲಿ ಪ್ರತಿಷ್ಠೆಯಿರುವ, ಅಥವಾ ಸುಲಿಗೆಯಿಂದ ಕೆಲಸ ಮಾಡಿ ತೋರಿಸಬಲ್ಲ ಕಾರ್ಯಕರ್ತರು ಗ್ರಾಮಕ್ಕೈದು ಮಂದಿಯಂತೆ ದೊರೆತ ರಾದರೆ ದೈವದೇವರುಗಳ ಹಿಂಡು ಹಿಂಡನ್ನೇ ಗಡೀಪಾರು ಮಾಡಬಹುದು. ಪ್ರತಿಯೊಬ್ಬ ಗ್ರಾಮಹಿತೈಷಿಯೂ ಈ ವಿಷಯವನ್ನು ಗಾಢವಾಗಿ ಯೋಚಿಸಿ, ಕಾರ್ಯಕ್ಕಿಳಿಯಲಿ.



# ಸ ಪ ತ್ನೀ ಕ ಜ ವಾ ಹಿ ರ್ !

ದುಗುಡವೇತಕೆ ಮನದಿ ದುಮ್ಮಾನವೇಕೆ?
ಹಗಲಿರುಳು ತಪಿಪ ಮನಸಿಲಿ ಶಾಂತಿ ಜೋಕೆ!
ಜಗದಿ ಹುಟ್ಟುವದೇನು? ಸಾವು ಇಹುದೆಲ್ಲಿ?
ಮೊಗದಿರುಹಿ ನೋಡಲದು ಬರಿಯ ಕನಸಿಲ್ಲಿ!
ಹಗಲಿರುಳು ತೋರಿಬರುತಿಹ ರವಿಶಶಿಯರು-
ಜಗವ ಬೆಳಗಿಸಿ ದಿನದಿನದಿ ಸಾಯುತಿಹರು-
ಜಗದ ದೇವರು ಕೃಷ್ಣ ಕ್ರೈಸ್ತೇಸು ಅಲ್ಲಾ
ಮೊಗದೋರಿ ನಲಿದರ್ರೈ ಈಗವರು ಇಲ್ಲ!
ಮಿಗೆ ಧರ್ಮವಾಳಿ ಬಾಳಿದ ರಾಜರೆಲ್ಲ-
ಹಗೆಗಳೇ ನೋಡಿರ್ರೈ; ಭೂಮಿಯೊಳಗಿಲ್ಲ!
ಸೊಗಸಾಗಿ ಪೇಳುವೆನು ಮಾತಿದುವೆ ನಿಜವು-
ಬಗೆಯರಿತು ನೋಡಿದಡೆ ಬರಿಮಾಯ ಜಗವು!

X X X X

ಹಿಂದಿನವರಿಹರಿಂದು! ಕುಂದದಿರು ಮನದಿ,
ಬಂಧನದಿ ಮನವಿರಿಸಿ ಇಣುಕಲದು ನಿಜದಿ
ಕುಂದಣದ ಪ್ರಭೆಯಂತೆ, ಚಂದಿರನ ಸೊಗಸಂತೆ
ಮಂದಿರದ ಬೆಳಕಂತೆ, ಸುಂದರಿಯ ಬೊಟ್ಟಂತೆ,
ಚಂದದಲಿ ಮಿರುಗುವುದು; ಹೊಂದಿಮನ ಬೆರೆಯುವುದು,
ನೊಂದಮನ ತೋಷತುರಗವನೇರಿ ಧಾವಿಪುದು!
ಬಿಂದಿಗೆಯು ಹೊರಕಳಚಿ ನೀರು ಮಣ್ಣನು ಸೇರಿ-
ಮಂದಬುದ್ಧಿಲಿ ಬೇಯ್ವುದಿದುವೆ ಜಡ ಸೂರೆ!
ತಿಂದ ತಿನಸನು ಬರಿದೆ ವ್ಯರ್ಥವೆಂದೆನಬೇಡ
ಸಂದವರು ಇನ್ನಿಲ್ಲವೆಂದು ಕಳವಳಬೇಡ

ಮುಂದಿನಾ ಗುರಿಗೆ ಕೈನೀಡಿ ತೋರಿಪರು-
ಬಂಧನವ ಬಿಡಿಸೆ ಮೈಯುರಿಯೆ ಬೆರೆತಿಹರು!

X X X X

ನೆಹರುನೇಸರ ಬೀರಿ ಬೆಳಗುತಿಹೆ ಕಾಲದಲಿ
ಕಹಳೆಯುದು ಕೂಗಿ ಎಚ್ಚರಿಪ ಸನ್ನಾಹದಲಿ
ತಹತಹವದೇನು? ನಿನ್ನಾಣೆ–ನೀಧನ್ಯ!
ಬಹಳ ಪುಣ್ಯವ ಮಾಡಿ ಕೈಹಿಡಿದೆ ಸನ್ಮಾನ್ಯ!
ಆಹುದು ನಿನ್ನಯ ಕಿರಣ ಸವಿಯನ್ನು ಸವಿದವಳು-
ಇಹಳೆಂದು ನೆರೆನಂಬು ಪೂಜ್ಯತೆಗೆ ನೆಲೆಯುವಳು!

X X X X

ಲೋಕತೇರನು ಮಾಡಿ ನೀವು ಗಾಲಿಗಳಾಗಿ
ನೂಕಿದಿರಿ ಶತ್ರುಗಳ ಎದೆಯ ಮಾರ್ಗದಿ ಸಾಗಿ
ಲೋಕ ನಿಂದಿಹುದಿಲ್ಲ; ಗಾಲಿ ಕಳಚಿದುದೆಲ್ಲಿ?
ವ್ಯಾಕುಲದ ಚಾಂಚಲ್ಯ ಸ್ಥಿತಿಯು ಮನದಲ್ಲಿ!

X X X X

ಪತಿಗೆ ಸರಿ ಸತಿಯಿಹಳು ವರ ಮಹಾಪತಿವ್ರತಳು,
ಗತಿಸಿ ಪೋಪುದು ಹೇಗೆ? ಹೃದಯದೊಳಗಿಹಳು.
ಸುತಭಾರತದ ಸೇವೆಯಲಿ ದೇಹ ಕೊರಡಾಗಿ
ಸತತ ಸವೆದುದು! ಸಿರಿಯು ಬಡತನದ ಬದುಕಾಗಿ!
ಸುತರನ್ನು ಪಡೆದ ಹಂಬಲ ತೊರೆದ ಪೂಜಿತೆಯು!
ವ್ರತವೆ ದೇಶದ ಸೇವೆಯೆಂದ ಮಹಮಾನಿತೆಯು!

X X X X

ಅರೆಬಟ್ಟೆ-ಅರೆಮೈಯು-ಬಿರಿದ ನಗು ಮೊಗದ-
ಕರಗಳಲಿ ಮಿರುಗುತಿಹ ಬರೆ ಗಾಜು ಸೊಗದ-
ಕರುಣೆಯಲಿ ದೀನರನು ಹಿಡಿದು ಸಂತೈಪ ಮನ
ಕರಗಿ ನೀರಾಗಿ ಮಾತೆಯ ಹೃದಯ ತಂಪಾಗಿ-

ಸೆರಗ ಬಿಗಿಹಿಡಿದು ಸೊಂಟಕೆ ಕಟ್ಟಿ ಧಾವಿಸುವ-
ಪರಿಯೇನು! ವೀರರಮಣಿಯೆ ಜೀವಿತವು ವಂದ್ಯ!

X X X X

ಭೀತಿ ನಿನ್ನೊಳಗಿಲ್ಲ-ದಾತೆ ಪೂಜಿತೆ ಮಾತೆ!
ಖ್ಯಾತೆ, ನಿಜ, ನೆಹರುರಾಯರ ವರದ ಪ್ರೀತೆ!
ಮಾತುಮಾತಿಗೆ ನಿನ್ನ ನೂಕಿದರು ಜೈಲೊಳಗೆ
ಸೋತರೈ ನೀತಿಮೂರ್ತಿಯು ಎದುರು ನಿಲ್ಲುವಡೆ!
ಕಾತರವದಿಲ್ಲ; ತಾಪವು ಮನದಿ ಇನಿತಿಲ್ಲ;
ಆತುರದ ಮುಖದ ಸೊಂಪದು ಸೋಲಿಸುವದಲ್ಲ!.

X X X X

ನಿರ್ಮೋಹ ಮೂರ್ತಿಯನು ಕೈಹಿಡಿದೆ ಧನ್ಯ!
ನಿರ್ಮಲ ಮನಕೆ ಮನವ ಕೂಡಿದ್ದೆ ಧನ್ಯ!
ಕಾರ್ಮುಗಿಲ ರೇಖೆಯಂದದಿ ಹೊಳೆದು ಗತಿಸಿದುದು!
ಮಾರ್ಮಿಕದಿ ಪರಕೀಯರೆದೆಯ ದಹಿಸಿದುದು!
ಸೂರ್ಯಚಂದ್ರರ ಗತಿಯ ಅನುಸರಿಪ ಕೀರ್ತಿ!
ಕಾರ್ಯರೂಪದಿ ಮೆರೆದ ಮನು ಹೃದಯ ಮೂರ್ತಿ!!
ಸಿರಿಯೂರ ಸರಿಮಾಡೆ ನೀವೆಲ್ಲರೊಡಗೂಡಿ-
ಹರಿತಾದ ಖಡ್ಗದಲಿ ಬಿಳಿಯೊಡಲ ತಳನೋಡಿ-

M. S. H.
ಹಳ್ಳೀಕೂಟ—ಶಿರ್ಸಿ.



# ಬಡ ಕೃಷಿಕ!

(ಭೋಗಷಟ್ಪದಿ)

ದೀನನಾಗಿ ಕರೆದು ದೇಶ
ದಾಣೆಯಿಟ್ಟು ನುಡಿವೆ ನಿಮ್ಮ
ಪ್ರಾಣತೆತ್ತು ಕೈಯುಕೊಡಲು ಮುಂದೆ ನೆಗೆಯಿರಿ.
ದಾನಿಯಾದ ಮಾತೆಯಿವಳು
ದೀನೆಯಾಗಿ ಕೊರಗುತಿಹಳು!
ಕಾಣದಂತೆ ಹಿಡಿದ ಕೈಗಳನ್ನು ಕೊಯ್ಯಿರಿ.
　　ಬಡವನಾದ ಕೃಷಿಕ ನಾನು
　　ಬಿಡದೆ ಕೂಗಿ ಕರೆವೆ ಪ್ರೀತಿ
　　ಬಡುತ ಬನ್ನಿ! ತನ್ನಿ ದಾಹವೇರ್ದ ಹೃದಯಕೆ.
　　ಕೊಡಿರಿ ಹಳತ-ಹೊಸತ ಹವನ
　　ತೊಡೆದು ಜಾತಿ ಭೇದವನ್ನ-
　　ಸುಡಿರಿ ಮೇಲುಕೀಳ! ಕೈಯ ಕೊಟ್ಟು ಕಾಯಿರಿ!
ಹಳ್ಳಿಯಾಳು ಗೇದ ಕೂಳು
ಕೊಳ್ಳೆಯಾಗಿ ಘಾಸಿಯಾಗಿ,
ಒಳ್ಳೆತನಗಳನ್ನು ಕಳೆದು ಸುಳ್ಳನಾದೆನು!
ಹಳ್ಳಿ ಪಟ್ಟಣಗಳನು ಸುತ್ತಿ
ಕೊಳ್ಳೆರೆಂದು ಬಿಡದೆ ಎತ್ತಿ
ಎಲ್ಲರನ್ನು ಬೇಡಬಂದೆ! ದೀನಕಾಯಿರಿ!
　　ಉಸಿರು ಕಟ್ಟಿ ದಾಹವೇರಿ
　　ನೊಸಲ ತಂಪು ಅಡಗಿ ತೀರಿ
　　ಕೊಸರಿಕೊಂಬೆ ಕೆಸರಿನಲ್ಲಿ ಕಸುವು ಅಡಗಿದೆ!
　　ಬಸಿರ ಬೇನೆಯಿಂದ ಮಾತೆ
　　'ಕೃಷಿಕ' ದೀನನೆಂದೆ ಭೀತೆ!
　　ಹಸುರು ಹಾಸಿನಿಂದ ಹೊದಿಸೆ ಜಸವು ನಿಮಗಿದೆ!

(ಹಳ್ಳೀಕೊಟ, ಶಿರ್ಸ.)

# ಮಲತಾಯಿತನ

(ಬರೆದವರು.—ವ್ಹಿ. ರಾಮಚಂದ್ರರಾಯರು, ಶಿರ್ಶಿ.)

●

೧

ಚೈತ್ರಮಾಸದ ಕೃಷ್ಣ ಪಕ್ಷದ ರಾತ್ರಿ! ಎಲ್ಲೆಲ್ಲಿಯೂ ಅಂಧಕಾರ. ಶಾಂತತಾಸಾಮ್ರಾಜ್ಯವು ಎಲ್ಲ ಕಡೆಗೂ ಪಸರಿಸಿರುವದು. ಅಂದು ಅಮಾವಾಸ್ಯೆಯಾಗಿತ್ತು. ಆದುದರಿಂದ ಆ ನಿಶೆಯು ಅಷ್ಟು ಗಂಭೀರ ವಾಗಿ ಕಾಣಲಿಕ್ಕೆ ಕಾರಣವಾಗಿತ್ತು. ಅಂತಹ ಸಮಯದಲ್ಲಿ ಒಂದು ಮನೆಯ ಅಂತಸ್ತಿನ ಒಂದು ಕೋಣೆಯಲ್ಲಿ ಒಬ್ಬ ಮನುಷ್ಯನು ಯೋಚಿ ಸುತ್ತ ಸುಖಾಸನದ ಮೇಲೆ ಕುಳಿತಿದ್ದನು. ಆಗ ಅವನನ್ನು ನೋಡಿದರೆ ಅವನ ಮನಸ್ಸು ಯಾವುದೋ ದೀರ್ಘ ವಿಚಾರ ಮಾಡುತ್ತಿದ್ದಂತೆ, ಅವನ ಮೊಗವೇ ಹೇಳುತ್ತಿತ್ತು. ಸಮುದ್ರದ ಅಲೆಗಳ ಮಧ್ಯದಲ್ಲಿ ಸುತ್ತಿ ಸುಳಿವ ನೌಕೆಯಂತೆ, ಅವನ ದೀರ್ಘ ವಿಚಾರವು ಮಹತ್ತರ ದುಃಖದ ಅಲೆಗಳ ಮಧ್ಯದಲ್ಲಿ ಸಿಕ್ಕಿ, ಅದು ಮತ್ತೂ ಅವನಿಗೆ ಬಹಳ ತಾಪ ವನ್ನುಂಟುಮಾಡುತ್ತಿತ್ತು.

ಅವನ ಹೆಂಡತಿ ಸುಗುಣೆಗೆ ನಾಲ್ಕು ದಿನಗಳಿಂದ ಬರುತ್ತಿದ್ದ ಜ್ವರವು ಆರಿದಿರಲಿಲ್ಲ. ಅವನು ಆ ಊರಿನಲ್ಲಿರುವ ಹೆಸರುವಾಸಿಯಾದ ವೈದ್ಯ ರನ್ನೆಲ್ಲಾ ಕರೆಯಿಸಿ, ಔಷಧೋಪಚಾರವನ್ನು ನಡೆಸಿದ್ದನು. ಆದರೆ ಎಲ್ಲ ವೈದ್ಯರು, ಆ ವಾರ ಕಳೆದರೆ ನಂತರ ಚಿಂತೆಯಿಲ್ಲವೆಂದ ಹೇಳಿದ್ದರು. ಆದಿನ ಕಾಯಿಲೆಯು ಭೀಕರಸ್ವರೂಪವನ್ನು ತಾಳಿದ್ದಿತು. ಅವಳನ್ನು ನೋಡಲು ಬಂದವರು, ದೀರ್ಘಶ್ವಾಸವನ್ನು ಬಿಟ್ಟು ತಲೆಯಾಡಿಸಿ ಕೊಳ್ಳುತ್ತಾ ಮೌನದಿಂದ ಹೋಗುವದನ್ನು ನೋಡಿ, ಅವಳ ಕಡೆಗಾಲವು ಸಮೀಪಿಸಿತೆಂದು ಸುರೇಂದ್ರನು ತಿಳಿದನು. ತನ್ನ ಪ್ರಾಣಪದಕವು ಅಪ ಹೃತವಾಗುವ ಚಿಹ್ನೆಯು ಸ್ಪಷ್ಟವಾಗಿ ಕಂಡುಬರುತ್ತಿತ್ತು. ಆದುದರಿಂದ

ಸುರೇಂದ್ರನು ತನ್ನ ಸ್ಥಿತಿಯನ್ನು ನೆನೆದುಕೊಂಡನು. ತನ್ನ ಪ್ರೇಮದ ಪುತ್ರಿ ರಮೆಯ ಮದುವೆಯನ್ನು ನೋಡಬೇಕೆಂಬ ಕಾಂಕ್ಷೆಯು ಅವಳಿಗೆ ಬಹುವಾಗಿದ್ದಿತು. ಆದರೆ, ಅದರ ಬದಲಾಗಿ ರಮೆಯ ಬಾಲ್ಯದಲ್ಲೇ ಅವಳು ಈ ಲೋಕವನ್ನು ಬಿಟ್ಟು ಪರಲೋಕಕ್ಕೆ ಹೋಗುವ ಸಂಭವವು ಒದಗಿತ್ತು. ರಮೆಗೆ ಗತಿಯಾರೆಂದು ಆಲೋಚಿಸಿದನು.

ಆದರೆ ಯೋಚಿಸಿದಷ್ಟೂ ಯೋಚನೆಯು ಮುಂದರಿಯಿತೇ ಹೊರತು, ಸಮಾಧಾನಕರವಾದ ಪ್ರತ್ಯುತ್ತರವು ಅವನಿಗೆ ದೊರೆಯಲೇ ಇಲ್ಲ. ಹಾಗೆಯೇ ಯೋಚಿಸುತ್ತಿದ್ದಾಗ, ತನ್ನ ಪತ್ನಿ ಸುಗುಣೆ ಕರೆದಂತಾಯಿತು. ಕೂಡಲೆ ಆವನು ಪಕ್ಕದಲ್ಲಿದ್ದ ಕೋಣೆಗೆ ಹೋದನು. ಅಲ್ಲೇನು? ಸುಗುಣೆಯು ಮಂಚದ ಮೇಲೆ ಮಲಗಿರುವಳು ಸುತ್ತ ಮುತ್ತಲೂ ಲೆಕ್ಕವಿಲ್ಲದಷ್ಟು ಔಷಧಿಯ ಸೀಸೆಗಳು! ಆಗ ಅವಳನ್ನು ನೋಡಿದರೆ ಎಂಥಾ ಕಲ್ಲಿನ ಹೃದಯವಾದರೂ ಕರಗಿ ಹೋಗುತ್ತಿದ್ದಿತು. ಆಗವಳಿಗೆ ಮರಣವೇದನೆ; ಕಡು ಸಂಕಟ. ಸುರೇಂದ್ರನು ತುಸು ಹಾಲು ಕುಡಿಸಿ, "ಏನು, ಸುಗುಣಾ?" ಎಂದು ಕೇಳಿದನು.

ಸುಗುಣೆಯು ತನ್ನ ಬಲಗೈಯನ್ನು ತನ್ನ ಸ್ವಾಮಿಯ ಮುಂದಿರಿಸಿ, ಏಕಾಗ್ರದೃಷ್ಟಿಯಿಂದ ಸುರೇಂದ್ರನನ್ನೇ ನೋಡಲಾರಂಭಿಸಿದಳು. ಆ ದೃಷ್ಟಿಯಲ್ಲಿ ಅದೆಂತಹ ಆಶೆ! ಅದೆಂತಹ ಭಕ್ತಿಯುಕ್ತ ಪ್ರೇಮ!! ಎಂಥಾ ಕಠಿಣ ಹೃದಯವನ್ನೂ ಕರಗಿಸುವಂತಹ ಅದೆಂತಹ ನೋಟ!!! ಸುರೇಂದ್ರನ ಕಣ್ಣುಗಳಲ್ಲಿ ನೀರು ತುಂಬಿತು. ಇಬ್ಬರ ಹೃದಯಗಳೂ ದಾರುಣವಾಗಿ ಚಡಪಡಿಸುತ್ತಿದ್ದವು. ಇಬ್ಬರ ಕಣ್ಣುಗಳಲ್ಲಿಯೂ ಅಶ್ರುಧಾರೆ! ಒಬ್ಬರನ್ನೊಬ್ಬರು ಅಗಲಿರಲಾರದೆ, ಒಬ್ಬರ ವಿಯೋಗವನ್ನೊಬ್ಬರು ಸಹಿಸಲಾರದೆ, ಬರುತ್ತಿದ್ದ ಅಶ್ರುಧಾರೆಯನ್ನು ಅಡ್ಡಗಟ್ಟಲು ಯಾರು ತಾನೇ ಸಮರ್ಥರು? ಕಟ್ಟಕಡೆಗೆ ಸುಗುಣೆಯೇ, ತನ್ನ ದುಃಖವನ್ನು ಅಡಗಿಸಿಕೊಂಡು, "ದುಃಖಿಸುತ್ತೀರೇಕೆ? ವಿಧಿ ಸಂಕಲ್ಪವನ್ನು ಅದ್ಯಾರು ತಡೆಗಟ್ಟಲು ಬಲ್ಲರು? ವೃಥಾ ಶೋಕಿಸಿ ಮನಸ್ಸಿಗೆ ವ್ಯಾಕುಲತೆಯನ್ನು ಹಚ್ಚಿಕೊಳ್ಳಬೇಡಿರಿ"! ಎಂದಳು.

ಸುರೇಂದ್ರನು ನಿಟ್ಟುಸಿರೊಂದನ್ನು ಬಿಟ್ಟು, "ಇಲ್ಲ ಸುಗುಣಾ, ಶೋಕಿಸುವುದಿಲ್ಲ. ನಿನಗೇನು ಬೇಕು?" ಎಂದು ಕಾತರತೆಯಿಂದ ದೀನತೆಯಿಂದ ಕೇಳಿದನು.

ಸುಗುಣೆ:— ನನಗೆ ಬೇಕಾದ್ದನ್ನು ನಡೆಯಿಸಿ ಕೊಡುವೆನೆಂದು ಪ್ರತಿಜ್ಞೆ ಮಾಡುವಿರಾ?

ಸುರೇಂದ್ರ:— ಖಂಡಿತನಾಗಿಯೂ ನಡೆಸಿಕೊಡುವೆನು. ಹೇಳು.

ಸುಗುಣೆ;—ನಾನು ನಿಮ್ಮನ್ನು ಅಗಲಿದ ನಂತರ ತಮ್ಮ ಚರಣ ಸೇವೆಗೆ ಮತ್ತೊಬ್ಬ ಭಾಗ್ಯಶಾಲಿನಿಯನ್ನು ತರಬೇಕು.

ಸುರೇಂದ್ರ:—ಇಲ್ಲ; ಸುಗುಣಾ, ಅದಾಗದು! ನನ್ನ ಹೃದಯವನ್ನು ನಿನಗೆ ಕೊಟ್ಟಿರುವಾಗ ಅದನ್ನೇ ಇನ್ನೊಬ್ಬಳಿಗೆ ಹೇಗೆ ಕೊಡುವದಾದೀತು?

ಸುಗುಣೆ:—ಸುಳ್ಳು ಮಾತು! ನಾಲ್ಕು ದಿನದಲ್ಲಿ ನಿಮ್ಮ ಹೃದಯವು ನಿಮ್ಮದೇ ಆಗಿ ಅದನ್ನು ಇನ್ನಾರಿಗೆ ಕೊಡುವದೆಂದು ಯೋಚಿಸುವಿರಿ?

ಸುರೇಂದ್ರ:—ಇಲ್ಲ. ಸುಗುಣಾ, ನಾನೇಕೆ ಸುಳ್ಳು ಹೇಳಲಿ? ಕೊನೆ ಗಾಲದಲ್ಲಿ ಸುಳ್ಳು ಹೇಳಿ ವಂಚಿಸುವೆನೇ? ನಿನ್ನಾಣೆಗೂ ನಾನು ದ್ವಿತೀಯ ವಿವಾಹ ಮಾಡಿಕೊಳ್ಳಲಾರೆ.

ಸುಗುಣೆ:—ನಾಥ, ಕ್ಷಮಿಸಿರಿ! ನನ್ನ ಅಂತ್ಯ ಪ್ರಾರ್ಥನೆಯನ್ನು ನೆರವೇರಿಸಿರಿ. ತಾವು ಪುನಃ ಮದುವೆಯಾಗಲೇ ಬೇಕು.

ಸುರೇಂದ್ರ:—ಅದೊಂದನ್ನು ಮಾತ್ರ ನಡೆಸಲಾರೆ.

ಸುಗುಣೆ:—ಹಾಗಾದರೆ ನಮ್ಮ ರಮೆಯನ್ನು ದಿಕ್ಕಿಲ್ಲದವಳನ್ನಾಗಿ ಮಾಡುವಿರಾ?

ಸುರೇಂದ್ರ:—ಪೋಷಣೆಗಾಗಿ ಒಬ್ಬ ದಾದಿಯನ್ನು ನೇಮಿಸುವೆನು.

ಸುಗುಣೆ:—ಛೀ, ಛೀ ತಮ್ಮ ಏಕಮಾತ್ರ ಪುತ್ರಿಯನ್ನು ಸೇವಕಿಯೊಬ್ಬಳ ಕಡೆಗೆ ಹಾಕಬೇಕೆ? ಮರಣಕಾಲದಲ್ಲಿ ಇದಕ್ಕಿಂತಲೂ ಹೆಚ್ಚು ವ್ಯಥೆಯನ್ನು ಕೊಡುವದಿದ್ದೀತೇ?

ಸುರೇಂದ್ರನು ಆಶ್ಚರ್ಯದಿಂದ,—ಸುಗುಣಾ, ದಾದಿಗಿಂತಲೂ ಮಲತಾಯಿಯೇ ಉತ್ತಮಳೆಂದು ನಿನ್ನ ಅಭಿಪ್ರಾಯವೇ?

ಸುಗುಣೆ:—ಹೌದು. ಯೋಗ್ಯಳಾದ ತರುಣಿ ತಮಗೆ ದೊರೆತಲ್ಲಿ, ರಮೆಯನ್ನು ಅವಳು ವಿಶ್ವಾಸದಿಂದ ನೋಡುವಳು. ಅದೂ ಅಲ್ಲದೆ ತಮಗೂ ಸುಖವು ಲಭಿಸುವದು. ನಾಥಾ, ನಾನಿನ್ನು ಈ ಲೋಕದಲ್ಲಿ ಹೆಚ್ಚು ಹೊತ್ತು ಜೀವಿಸುವಂತಿಲ್ಲ. ತಾವು ಖಂಡಿತವಾಗಿಯೂ ಪುನಃ ಮದುವೆಯಾಗಲೇ ಬೇಕು. ಇದೇ ನನ್ನ ಅಂತಿಮ ಆಶೆ!! ರಮೆಯನ್ನು ಕರೆಯುವಿರಾ?

ಸುರೇಂದ್ರನು ಹೊರಗೆ ಹೋದನು. ಒಡನೆಯೇ, ಅನುಪಮ, ರೂಪ-ಲಾವಣ್ಯವತಿಯಾದೊಬ್ಬ ಏಳು ವರ್ಷದ ಬಾಲೆಯನ್ನು ಸುರೇಂದ್ರನು ಕರೆದುಕೊಂಡು ಬಂದನು ಅವಳೇ ನಮ್ಮ ಕಥಾ ನಾಯಕಿಯಾದ ರಮೆ. ಬಂದವಳು ತಾಯಿಯ ಮುಖವನ್ನು ಮುಟ್ಟಿ, ಆತುರದಿಂದ 'ಅಮ್ಮಾ, ಗಂಜಿಯನ್ನು ತರಲೇ?" ಎಂದು ಕೇಳಿದಳು. ಸುಗುಣೆಯು ಮಾತಾಡದೆ ಉಕ್ಕಿ ಬರುತ್ತಿದ್ದ ದುಃಖವನ್ನು ತಡೆದುಕೊಂಡು ಎವೆಯಿಕ್ಕದೆ ಪುತ್ರಿಯನ್ನೇ ನೋಡತೊಡಗಿದಳು. ಬಿಕ್ಕಿ ಬಿಕ್ಕಿ, ಅಳಲು ಪ್ರಾರಂಭಿಸಿದಳು. ಪುತ್ರಿಯ ಕೊರಳನ್ನು ತಬ್ಬಿಕೊಂಡು, "ರಮಾ, ನಿನಗೆ ಮಂಗಳವಾಗಲಿ ನಿನ್ನ ಮುಂದಿನ ತಾಯಿಯು ನಿನ್ನನ್ನು ನನಗಿಂತಲೂ ಅತ್ಯಧಿಕ ಪ್ರೇಮದಿಂದ ಸಲಹುವಳು. ನನಗಾಗಿ ದುಃಖಿಸದಿರು. ದೇವರಲ್ಲಿ ಭಕ್ತಿಯಿಡು. ನಾಥ ಅನಾಥರಿಗೆಲ್ಲ ರಕ್ಷಿಸುವವನು ಆ ಪರಮಾತ್ಮನು. ನೀನಿನ್ನೂ ಚಿಕ್ಕವಳು. ನಾನು ಹೋದರೂ ನಿನ್ನ ಕ್ಷೇಮವನ್ನು ಆ ಪರಮಾತ್ಮನು ಯಾವಾಗಲೂ ಕಾದೇ ಇರುವನು. ದೇವರಿಗೆ ವಿರುದ್ಧವಾದ ದ್ರೋಹವನ್ನೊಂದೂ ಮಾಡಬೇಡ. ಎಲ್ಲರಿಗೂ ಸಹಾಯಕಳಾಗಿಯೇ ಇರು. ಮಗೂ, ನಾನು ಇನ್ನು ನಿನಗೇನು ಹೇಳಲಿ?" ಎಂದಳು.

ರಮಾಕುಮಾರಿಗೆ ತಾಯಿಯ ಬುದ್ಧಿವಾದವು ಯಾವದೂ ತಿಳಿಯಲಿಲ್ಲ. ತಾಯಿಯು ಅಳುತ್ತಿದ್ದರಿಂದ ಆವಳೂ ಕಣ್ಣೀರನ್ನಿಟ್ಟಳು. ಇದನ್ನು ನೋಡಿ ಸುರೇಂದ್ರನು ಸಹಿಸಲಾರದೆ, ಅವನೂ ಸಹ ಸಣ್ಣ ಹುಡುಗರಂತೆ ಅಳಲಿಕ್ಕೆ ಪ್ರಾರಂಭಮಾಡಿದನು. ಸುಗುಣೆಯು ಸ್ವಲ್ಪ ಕದಲಿದಳು. ನಂತರ ನಿಶ್ಶಬ್ದ!! ಸುರೇಂದ್ರನು ಪುನಃ 'ಸುಗುಣಾ'

ಎಂದು ಕರೆದನು. ಬಾಲಿಕೆಯಾದ ರಮೆಯು ಭೀತಳಾಗಿ 'ಅಮ್ಮಾ' ಎಂದು ಕರೆದಳು. ಉತ್ತರವಿಲ್ಲ!! ಸುಗುಣೆಯ ಜೀವಜ್ಯೋತಿಯು, ಈ ನಶ್ವರದೇಹವನ್ನು ಬಿಟ್ಟು, ಅನಂತ ವಾಯುವಿನಲ್ಲಿ ಬೆರೆತು ಕಾಣ ದಂತಾಗಿತ್ತು. ಸುರೇಂದ್ರನು ಹುಚ್ಚನಂತೆ, 'ಸುಗುಣಾ'ಎಂದು ಕೂಗುತ್ತ ಅವಳ ಮೈಮೇಲೆ ಬಿದ್ದು ಹೊರಳಾಡಿದನು!!!

೨

ಸಾಧಾರಣ ಎಂಟು ಹತ್ತು ತಿಂಗಳುಗಳಾಗಿದ್ದವು. ಸುಗುಣೆಯ ಸ್ಮೃತಿಯೆಲ್ಲವೂ, ಸುರೇಂದ್ರನ ಜ್ಞಾಪಕದಲ್ಲಿ ಮಸುಮಸುಕಾಗಿ ಹೋಗಿತ್ತು. ತನಗೊಬ್ಬ ಆ ಹೆಸರಿನ ಪತ್ನಿಯಿದ್ದಾಳೆಂದೂ, ಅವಳು ಸತ್ತುಹೋದಳೆಂದೂ ಮುಂತಾದ ವಿಷಯವು ಮಾತ್ರ ಅವನ ಮನಸ್ಸಿಗೆ ಬರುತ್ತಿತ್ತು. ತನ್ನ ಅನುಕೂಲತೆಗಳನ್ನು ಒದಗಿಸಿ ಕೊಡುವುದಕ್ಕೆ ಯಾರೂ ಇಲ್ಲದೆ ಇದ್ದಾಗ ಮಾತ್ರ ಸುಗುಣೆಯ ಜ್ಞಾಪಕವಾಗುತ್ತಿತ್ತು.

ಸುರೇಂದ್ರನ ಸ್ಥಿತಿಗತಿಗಳು ಒಳ್ಳೆಯವಾಗಿದ್ದುದರಿಂದ ಅವನಿಗೆ ದ್ವಿತೀಯ ವಿವಾಹಕ್ಕಾಗಿ ಹೆಣ್ಣುಕೊಡಲು ಎಷ್ಟೋ ಜನರು, ತಾಮ ಮುಂದೆ ತಾನು ಮುಂದೆ ಎಂದು ಆತುರಗೊಳ್ಳುತ್ತಿದ್ದರು. ಸುಗುಣೆಯು ಸತ್ತ ಕೂಡಲೆ ಅವನ ಜಾತಕ ಕೇಳಲು ಒಬ್ಬಿಬ್ಬರು ಯತ್ನಪಟ್ಟಿದ್ದರು. ಪತ್ನೀವಿಯೋಗದುಃಖದಲ್ಲಿದ್ದ ಅವನನ್ನು ಅಷ್ಟುಬೇಗನೆ ಪೀಡಿಸುವದು ಅನುಚಿತವೆಂದು, ಹೇಳಿದ ತಮ್ಮ ನೆಂಟರಿಷ್ಟರ ಮಾತಿನ ಮೇಲೆ, ಅವರು ಕೆಲವು ದಿನಗಳ ಮಟ್ಟಿಗೆ ಸುಮ್ಮನಿದ್ದರೂ, ಅನಂತರ ತಮ್ಮ ಪ್ರಯತ್ನ ಗಳನ್ನು ಬಲವಾಗಿ ಮುಂದುವರಿಸಿದರು. ಸ್ವಲ್ಪ ಕಾಲದಲ್ಲೇ ಸುರೇಂದ್ರನು ತನ್ನ ಮೃತ ಹೆಂಡತಿಯ ದುಃಖವನ್ನು ನಟಿಸುತ್ತಿದ್ದಂತೆಯೇ ಸುಶೀಲಾ ದೇವಿಯೆಂಬೊಬ್ಬ ತರುಣಿಯನ್ನು ಮದುವೆಯಾಗಿಬಿಟ್ಟನು. ಚತುರೆ ಸುಶೀಲಾದೇವಿಯು ಕೆಲವು ದಿನಗಳಲ್ಲೇ ಸುರೇಂದ್ರನ ಹೃದಯ ಸಿಂಹಾಸ ನಾಧಿಕಾರಿಣಿಯಾದಳು.

ಅವಳ ಸುಂದರ ಹೆಸರಿಗೂ, ಅವಳ ಗುಣಗಳಿಗೂ ಬಹು ವ್ಯತ್ಯಾಸ

ವಿದ್ದಿತು. ಅವಳ ಹೆಸರಿಗೆ ತಕ್ಕಂತೆ ಅವಳ ನಡೆನುಡಿಗಳು ಇದ್ದಿಲ್ಲವು. ತನ್ನ ಅಂತರ್ಯದ ಅಸೂಯೆ, ಸಿಟ್ಟು, ಹಗೆ, ಮುಂತಾದುವುಗಳನ್ನು ಬಹಿರಂಗಪಡಿಸದಂತೆ, ತನ್ನ ನಡೆನುಡಿಗಳನ್ನು ಬದಲಾಯಿಸಿಕೊಳ್ಳುತ್ತಿದ್ದಳು. ಹೀಗಿದ್ದ ಮೇಲೆ ಕೆಲವು ದಿನಗಳಲ್ಲೇ, ರಮಾಕುಮಾರಿಯು ಅತಿ ದುಷ್ಟಹುಡುಗಿಯೆಂದೂ, ಆ ದುಷ್ಟಗುಣಗಳನ್ನೆಲ್ಲಾ, ಅವಳ ಮೃತ ತಾಯಿಯ ಕಡೆಯಿಂದ ಪಡೆದಿದ್ದಳೆಂದೂ ಸುರೇಂದ್ರನ ಮನಸ್ಸಿನಲ್ಲಿ ಬಲವಾಗಿ ಸ್ಥಾಪಿಸಿದಳು

ಇದರ ಫಲವಾಗಿ ದಿನದಿನಕ್ಕೆ ಮಗಳ ಮೇಲಿನ ಪ್ರೀತಿಯು ಕಡಿಮೆಯಾಗುತ್ತಾ ಬಂದಿತು. ಯಾರನ್ನು ತನ್ನ ಪ್ರೇಮದ ಪುತ್ಥಳಿಯೆಂದು ಭಾವಿಸಿದ್ದನೋ, ಯಾವಳು ತನ್ನ ಪ್ರಿಯಪತ್ನಿ ಸುಗುಣೆಯ ಸದ್ಗುಣಗಳ ಪ್ರತಿಬಿಂಬವಾಗಿರುತ್ತಾಳೆಂದು ಯೋಚಿಸಿದ್ದನೋ, ಅಂತಹ ರಮೆಯನ್ನು ತನ್ನ ಬೆಡಗಿನ ಸುಶೀಲೆಯ ಪಾದಸೇವಕಿಯನ್ನಾಗಿ ಮಾಡಿಬಿಟ್ಟನು. ಸುರೇಂದ್ರನಿಗೆ ರಮೆಯ ಮೇಲೆ ಅವಿಶ್ವಾಸವು ದಿನದಿನಕ್ಕೆ ಬೆಳೆಯುತ್ತಲೇ ಬಂದಿತು. ತನ್ನ ಪತ್ನಿಯ ಮೇಲಿನ ಮೋಹಾಂಧಕಾರದಿಂದ ತನ್ನ ಪ್ರಿಯ ಪುತ್ರಿಯ ಕ್ಷೇಮವನ್ನು ಸಹ ವಿಚಾರಿಸುವುದನ್ನು ಬಿಟ್ಟನು. ಕಡೆಗೆ ಅವಳು ಅವನ ಮನೆಯಲ್ಲಿರುವದೇ ಅಸಹ್ಯವಾಗಿ ತೋರಿತು

ಆದರೂ ರಮೆಯ ಸೂಕ್ಷ್ಮಮತಿ, ಚಾತುರ್ಯ, ಪಿತೃಪ್ರೇಮ ವಿಧೇಯತೆ, ವಿನಯ, ಸೌಶೀಲ್ಯಗಳು ಎಲ್ಲರನ್ನೂ ಮೆಚ್ಚಿಸುವಂತಹದಾಗಿದ್ದವು. ದಿನದಿನಕ್ಕೆ ಕೊಡಿಯೊಡೆದು ಚಿಗುರುತ್ತಿದ್ದ ರಮೆಯ ಶೋಭೆಯನ್ನು ಸುಶೀಲಾದೇವಿಯು ಸಹಿಸಲಾರದೆ ಅವಳು ಗೆಳತಿಯರ ಮನೆಗಳಿಗೆ ಹೋಗದಂತೆ ಕಟ್ಟಾಜ್ಞೆಯನ್ನಿತ್ತಳು. ರಮೆಯು ಅದಕ್ಕೂ ತಲೆಬಾಗಿದಳು.

ಸುಶೀಲೆಯು ಕೊಡುವಂಥಾ ಕಾಟಗಳನ್ನು ಸಹಿಸಲುಅಶಕ್ಯವಾಯಿತು. ಅವಳು ಊಟಮಾಡುವದೂ, ಆಟವಾಡುವದೂ, ನಗುವದೂ ಸುಶೀಲೆಗೆ ಬಾಣದಿಂದ ಚುಚ್ಚಿದಂತಾಗುತ್ತಿತ್ತು. ಅವಳನ್ನು ಕಂಡರೆ ಹಾರಿ ಹಾರಿ ಬೀಳುತ್ತಿದ್ದಳು. ಇತರರಾರಾದರೂ ಇದ್ದರೆ, ಅವಳನ್ನು ನಗುನಗುತ್ತ

ಹೊಡೆದು, ಅವಳ ಮೇಲೆ ಇಲ್ಲದ ಸಲ್ಲದ ಆರೋಪಗಳನ್ನು ಹೊರಿಸಿ ದೂರುತ್ತಿದ್ದಳು. ಆದರೆ ಇದನ್ನೆಲ್ಲಾ ಹೇಳಿಕೊಳ್ಳುವದಾರಲ್ಲಿ? ತಂದೆಯು ಪತ್ನಿಯ ಮೋಹದಿಂದ ಬಂಧಿತನಾಗಿದ್ದನು! ಹಡೆದ ತಾಯಿಯು ಇದ್ದುದು ಸ್ವರ್ಗದಲ್ಲಿ! ಇನ್ಯಾರಲ್ಲಿ ಅವಳು ಮೊರೆಯಿಡಬೇಕು? ಸಾಯಂಕಾಲದಲ್ಲಿ ಗಿಡಗಳಿಗೆ ನೀರೆರೆಯುವಾಗ ತನ್ನ ದುಃಖವನ್ನು ಲತೆಗಳಿಗೆ ನಿವೇದಿಸುತ್ತ ತನ್ನ ಜನನಿಯನ್ನು ಕುರಿತು ಹಂಬಲಿಸುತ್ತಿದ್ದಳು. ತನ್ನ ಕಷ್ಟನಿವಾರಣೆಗಾಗಿ ಆ ಪರಮಾತ್ಮನನ್ನು ಅನನ್ಯಮನಸ್ಸಿನಿಂದ ಪ್ರಾರ್ಥಿಸುತ್ತಿದ್ದಳು!

೩

ಹೀಗಿರುವಾಗ ಒಂದು ದಿನ ಸುಶೀಲೆಯ ಮನೆಗೆ ಸರಾಫ ಪ್ರೇಮಚಂದನು ಏನೋ ಕೆಲಸದ ನಿಮಿತ್ತವಾಗಿ ಬಂದನು. ಆಗ ಸುರೇಂದ್ರನು ಮನೆಯಲ್ಲಿರಲಿಲ್ಲ. ಸುಶೀಲಾದೇವಿಯು ಹಾಗೆಯೇ ಅವನಿಗೆ ಹೇಳಿದಳು. ಅವನು ಹಿಂತಿರುಗಿ ಹೊರಟನು. ಆಗ ಸುಶೀಲೆಗೆ ಒಂದು ಆಲೋಚನೆಯುಂಟಾಯಿತು. ಕಿವಿಗಳಿಗೆ ವಜ್ರದ ವಾಲೆಗಳನ್ನು ಧರಿಸಬೇಕೆಂಬ ಆಶೆಯು ಅವಳಿಗೆ ಬಹುಕಾಲದಿಂದಲೂ ಇತ್ತು. ಆದರೆ ಸುರೇಂದ್ರನ ಸಂಪಾದನೆಯು ಅಂತಹ ವಾಲೆಯನ್ನು ಕೊಂಡುಕೊಳ್ಳುವಷ್ಟು ಇರಲಿಲ್ಲವಾದುದರಿಂದ ಮುಂದೆ ಕೊಳ್ಳುವೆನೆಂದು ಹೇಳಿ ಅವನು ತನ್ನ ಹೆಂಡತಿಯನ್ನು ಸಂತೈಸಿದ್ದನು. ಅವುಗಳನ್ನು ಮಾರುವ ಸರಾಫನೇ ಮನೆಗೆ ಬಂದಿರುವಾಗ ಅದನ್ನು ಕೊಂಡುಕೊಳ್ಳುವ ಅದೃಷ್ಟವು ಅವಳ ಹಣೆಯಲ್ಲಿ ಬರೆಯದಿದ್ದರೂ ಅದನ್ನೊಂದು ಸಲ ಕಣ್ಣಿನಿಂದ ನೋಡುವದಕ್ಕೆ ಅಡ್ಡಿಯೇನೆಂದು ಆಲೋಚಿಸಿದಳು. ಸರಾಫನು ಹೋಗಲು ಹೊರಟಿದ್ದನು. ಸುಶೀಲೆಯು, 'ಸರಾಫರೇ, ನಿಮ್ಮಲ್ಲಿ ವಜ್ರದ ವಾಲೆಗಳಿವೆಯೇ?' ಎಂದು ಕೇಳಿದಳು.

ಸರಾಫನು—ಹೌದಮ್ಮಾ ಇವೆ. ಎಷ್ಟು ಕ್ರಯದೊಳಗಿನವು ಆಗ ಬೇಕು ನಿಮಗೆ?

ಸುಶೀಲೆ—ಹೆಚ್ಚಿನ ಕ್ರಯದವು ಬೇಡ. ಸಾಧಾರಣದವು ಸಾಕು ಅವುಗಳನ್ನೊಂದು ಸಲ ನಾನು ನೋಡಬೇಕು.

ಸರಾಫ—ಸಾಧಾರಣ ಕ್ರಯದವು ಒಂದು ಜೊತೆ ಮಾತ್ರ ಇದೆ.

ಸುಶೀಲೆ— ಆಗಲಿ ನೋಡಿ, ಯಜಮಾನರಿಗೆ ತಿಳಿಸಿ, ಕೊಂಡುಕೊಳ್ಳುತ್ತೇನೆ. ನಮ್ಮ ರಮೆಯನ್ನು ನಿಮ್ಮ ಸಂಗಡ ಕಳುಹಿಸುತ್ತೇನೆ. ಇವಳ ಸಂಗಡ ಕಳುಹಿಸಿಕೊಡಿ. ನೋಡಿ ಹಾಗೆಯೇ ಪುನಃ ಕಳುಹಿಸಿ ಕೊಡುವೆನು ಎಂದು ಹೇಳಿದಳು.

ತನ್ನ ಚಿಕ್ಕತಾಯಿಯ ಮಾತನ್ನು ಕೇಳಿದಕೂಡಲೆ ಅವಳನ್ನು ಸಂತೋಷಪಡಿಸಬೇಕೆಂದು ಕಾದೇ ಇರುತ್ತಿದ್ದ ರಮಾಕುಮಾರಿಯು ಎದ್ದಳು. ಪ್ರೇಮಚಂದನು ಹುಡುಗಿಯನ್ನು ನೋಡಿದನು. ಅವಳು ಹತ್ತುಹನ್ನೊಂದು ವರ್ಷದವಳಾಗಿದ್ದಳು. ಅವಳ ಕಣ್ಣುಗಳಲ್ಲಿದ್ದ ಸರಳ ನೋಟವು ಕೂಡಲೆ ಅವನ ಮನಸ್ಸನ್ನು ಸೆಳೆದುಬಿಟ್ಟಿತು. ಮಕ್ಕಳ ಕೈಯಲ್ಲಿ ನಗಗಳನ್ನು ಕೊಡಲು ಎಂದೂ ಒಪ್ಪುತ್ತಿರದ ಪ್ರೇಮಚಂದನು ರಮಾಕುಮಾರಿಯ ಕೈಯಲ್ಲಿ ವಾಲೆಗಳನ್ನು ಕೊಟ್ಟು ಕಳುಹಿಸಲು ನಿಸ್ಸಂಕೋಚವಾಗಿ ಒಪ್ಪಿಕೊಂಡನು. ಸ್ವಲ್ಪ ಹೊತ್ತಿನಲ್ಲೇ ವಜ್ರದ ವಾಲೆಗಳ ಜೊತೆಯೊಂದನ್ನು ತೆಗೆದುಕೊಂಡು ರಮೆಯು ಬಂದು ತನ್ನ ಚಿಕ್ಕತಾಯಿಯ ಕೈಯಲ್ಲಿಕೊಟ್ಟು ಅದರ ಕ್ರಯವು ಎಂಟುನೂರಐವತ್ತು ರೂಪಾಯಿಗಳೆಂದು ಹೇಳಿದಳು.

ಸುಶೀಲೆಯು ಅದನ್ನು ತೆಗೆದುಕೊಂಡು ನೋಡಿದಳು. ನೋಡಿದ ಕೂಡಲೆ ಅವಳ ಮನಸ್ಸು ಅದರಲ್ಲೇ ತಲ್ಲೀನವಾಯಿತು. ಆ ಜೊತೆಯೊಂದನ್ನು ಧರಿಸದಿದ್ದರೆ ತಾನು ಬದುಕಿಯೂ ಏನು ಪ್ರಯೋಜನವೆಂದಂದುಕೊಂಡಳು. ಮಾನವನ ಆಶೆಗೆ ಮಿತಿಯುಂಟೆ? ಆಗ ಅವಳು ಮನಸ್ಸಿನಲ್ಲಿ ಹೀಗಂದುಕೊಂಡಳು. 'ಹೇ ಪರಮೇಶ್ವರಾ, ನನ್ನ ಅದೃಷ್ಟವು ಎಂತಹ ನಿಷ್ಠುರವಾದುದು? ಈ ಚಿಕ್ಕ ಪದಾರ್ಥವನ್ನು ಕೂಡ ಕೊಂಡುಕೊಳ್ಳುವ ಶಕ್ತಿ ನನ್ನ ಗಂಡನಿಗಿಲ್ಲ. ಇಂತಹ ನಿಷ್ಪ್ರಯೋಜಕನನ್ನು ನನ್ನ ಸೆರಗಿಗೆ ಗಂಟುಹಾಕಿದೆ? ಅಹಹಾ! ಮಾನವನ ಆಶೆಯು ಆಡಬಾರ

ದ್ದನ್ನೆಲ್ಲಾ ಅಡಿಸಿ ಬಿಡುವದು. ಆಶೆಯು ಮಾನವ ಜೀವನಕ್ಕೆ ಹತ್ತಿದ ಒಂದು ಪೈಶಾಚವು!!

ಕ್ಷಣದಲ್ಲಿ ಏನನ್ನೋ ಯೋಚಿಸಿ, ಒಳಗೆ ಹೋಗಿ, ತನ್ನ ಪೆಟ್ಟಿಗೆಯಿಂದ ಒಂದು ರೂಪಾಯಿ ತೆಗೆದು ರಮೆಗೆ ಕೊಟ್ಟು 'ನೀನು ಉಣ್ಣೆಯ ಚೀಲ ವನ್ನು ಹೊಲಿಯುವುದನ್ನು ಕಲಿಯಬೇಕೆಂದು ಹೇಳುತ್ತಿದ್ದೆಯಲ್ಲ. ಮಗೂ ತೆಗೆದುಕೋ, ನಿನಗೆ ಬೇಕಾದಷ್ಟು ಕೊಂಡುಕೊಂಡು, ಭಾಗೀರಥಿಯ ಬಳಿಗೆ ಹೋಗಿ ಅವಳಿಂದ ಹೊಲಿಯುವುದನ್ನು ಕಲಿತುಕೊ' ಎಂದಳು. ಸುಶೀಲತೆಗೆ ಅಕಸ್ಮಾತ್ ಉಂಟಾದ ಔದಾರ್ಯವನ್ನು ಕಂಡು ರಮೆಯು ಚಕಿತೆಯಾದಳು.

ತನ್ನ ಸಂಬಂಧವಾಗಿ ಚಿಕ್ಕ ತಾಯಿಗೆ ಅಂತೂ ಪ್ರೇಮೋತ್ಪನ್ನವಾಯಿ ತೆಂದು ರಮೆಯು ಆನಂದಸಾಗರದಲ್ಲಿ ಮುಳುಗಿದಳು. ತನಗಷ್ಟೇ ಸಾಕೆಂದು ರಮೆಯು ಹೇಳಿಕೊಂಡು ತನಗೆ ರೂಪಾಯಿ ಬೇಡವೆಂದು ಹೇಳಿ ಅದನ್ನು ಹಿಂತಿರುಗಿ ಕೊಟ್ಟಳು. ಆದರೆ ಸುಶೀಲೆಯು ಅದನ್ನು ಬಲಾತ್ಕಾರ ದಿಂದ ರಮೆಯ ಜೇಬಿನಲ್ಲಿ ಹಾಕಿ, ಅದನ್ನು ಬೇಕಾದಂತೆ ಖರ್ಚುಮಾಡಿ ಕೊಳ್ಳಲು ಅವಳಿಗೆ ಹೇಳಿದಳು. ಆಗ ರಮೆಯು ತನ್ನ ಚಿಕ್ಕ ತಾಯಿಗೆ ಸಿಟ್ಟು ಬಾರದಂತೆ ಮಾಡಲು ರೂಪಾಯಿಯನ್ನಿಟ್ಟುಕೊಂಡು ಅಲ್ಲಿಯೇ ನಿಂತಿದ್ದಳು. ಅವಳನ್ನು ಅಲ್ಲಿಂದ ಆದಷ್ಟು ಬೇಗನೆ ಕಳುಹಿಸಲು ಸುಶೀಲೆಯು ತಳಮಳಿಸುತ್ತಿದ್ದಳು ಆಗ ಸುಶೀಲೆಯು ರಮೆಗೆ, ಮಗೂ ನೀನು ಹೋದಾಗಲೇ ಭಾಗೀರಥಿಗೆ ಈದಿನ ಸಾಯಂಕಾಲ ಬರಹೇಳಿದೆ ನೆಂದು ಹೇಳು' ಎಂದು ಅಂದಳು. ರಮೆಯು 'ಆಗಲವ್ವಾ' ಎಂದು ಹೇಳಿ ರೂಪಾಯಿಯನ್ನು ಪುನಃ ಕೊಡಹೋದಳು. ಸುಶೀಲೆಯು ಅವಳನ್ನು ಪ್ರೇಮ ನಟನೆಯಿಂದ ನೂಕಿ "ಹೋಗು ಹೋಗು ಏನು? ನೀನಿನ್ನೂ ಚಿಕ್ಕ ಮಗುವೆ?" ಎಂದು ಕೇಳಿದಳು. ತನ್ನ ಚಿಕ್ಕತಾಯಿಯ ಆಜ್ಞೆಯನ್ನು ಕೂಡಲೇ ನಡೆಯಿಸಲು ಹೊರಟಳು. ಸುಶೀಲೆಯು ತನ್ನ ಮೇಲೆ ಪ್ರಸನ್ನ ಳಾದುದರಿಂದ ತಾನು ಸುಖಿಯಾದೆನೆಂದು ಹಿಗ್ಗಿದಳು.

# ೪

ರಮೆಯು ಭಾಗೀರಥಿಯ ಮನೆಗೆ ಹೊರಟ ಸ್ವಲ್ಪ ಹೊತ್ತಿನಲ್ಲೇ ಸರಾಫ ಪ್ರೇಮಚಂದನ ಒಬ್ಬ ಸೇವಕನು ಬಂದು, ವಾಲೆಯ ಜೋಡು ಬೇಕೇ? ಎಂದು ಕೇಳಲು ತನ್ನನ್ನು ಯಜಮಾನನು ಕಳುಹಿಸಿರುವನೆಂದು ಸುಶೀಲಾದೇವಿಯ ಹತ್ತಿರ ಹೇಳಿದನು. ಅದಕ್ಕೆ ಸುಶೀಲಾದೇವಿಯು— "ಹೌದು ಬೇಕು; ಕ್ರಯದ ವಿಷಯವನ್ನು ಯಜಮಾನರೇ ಮಾತನಾಡಲಿ ವಾಲೆಗಳನ್ನು ಪುನಃ ನಮ್ಮ ರಮೆಯ ಕೈಯಲ್ಲೇ ಕೊಟ್ಟು ಕಳುಹಿಸಿರುತ್ತೇನೆ" ಎಂದಳು. ಸೇವಕನು, "ದಾರಿಯಲ್ಲಿ ಅವರು ನನಗೆ ಕಾಣಿಸಲಿಲ್ಲವಮ್ಮ" ಎಂದನು. ಅದಕ್ಕೆ ಸುಶೀಲೆಯು, "ಇಲ್ಲ. ಅವಳು ಆಗಲೇ ಹೋದಳು. ನಾನೇ ಅವಳನ್ನು ಕಳುಹಿಸಿದೆನು. ಅವಳು ಚಿಕ್ಕವಳಾದುದರಿಂದ ನಿನ್ನ ಕಣ್ಣಿಗೆ ಕಾಣಿಸಿರಲಿಕ್ಕಿಲ್ಲ" ಎಂದಳು.

ಸೇವಕನು ರಮೆಯನ್ನು ಹುಡುಕುತ್ತ ಬೇಗನೇ ಹೊರಟನು. ದಾರಿಯಲ್ಲಿ ಅವನಿಗೆ ರಮೆಯು ಎಲ್ಲಿಯೂ ಸಿಗಲಿಲ್ಲ. ಅಂಗಡಿಯನ್ನು ತಲಪಿದ ಕೂಡಲೆ ಯಜಮಾನನನ್ನು ಕುರಿತು, "ಹುಡುಗಿಯು ಬಂದಳೇ? ಎಂದು ಕೇಳಿದನು. ಪ್ರೇಮಚಂದನು ಆಶ್ಚರ್ಯಗೊಂಡು, "ಇಲ್ಲ; ಇಲ್ಲಿಗೆ ಬರಲಿಲ್ಲ. ಆದರೆ ಅವರು ಏನು ಹೇಳಿದರು?" ಎಂದು ಕೇಳಿದನು. ಸೇವಕನು ಸುಶೀಲೆಗೂ ತನಗೂ ಆದ ಮಾತುಕತೆಗಳನ್ನು ತಿಳಿಸಿದನು. ಪ್ರೇಮಚಂದನು ಭೀತನಾದನು. ಅಷ್ಟು ಬೆಲೆಯ ವಾಲೆಗಳನ್ನು ಅಷ್ಟು ಚಿಕ್ಕ ಹುಡುಗಿಯ ಕೈಯಲ್ಲಿ ಕೊಟ್ಟು ಕಳುಹಿಸಿದ ಹುಚ್ಚುತನಕ್ಕೆ ತಾನೇ ಬೈದುಕೊಂಡನು.

ಪ್ರೇಮಚಂದನು ಅತಿ ವ್ಯಾಕುಲಗೊಂಡು ಸುರೇಂದ್ರನ ಮನೆಗೆ ಕೂಡಲೆ ಹೊರಟನು. ದಾರಿಯಲ್ಲಿ ಹೋಗುವಾಗ ಅವಳು ಸಿಕ್ಕಬಹುದೆಂಬ ಆಶೆಯಿಂದ ದಾರಿಯಲ್ಲಿ ಸಿಕ್ಕವರೆಲ್ಲರಿಗೂ ರಮೆಯ ವಿಷಯವನ್ನು ಕೇಳುತ್ತ, ನಡೆದ ಸಂಗತಿಯನ್ನು ಹೇಳುತ್ತ ಹೋದನು. ಕೇಳಿಕೇಳಿದ ಒಬ್ಬೊಬ್ಬ ವ್ಯಕ್ತಿಯು ಒದೊಂದು ವಿಧದಲ್ಲಿ ಹೇಳಿದ್ದರಿಂದ ಪ್ರೇಮಚಂದನು ಸುರೇಂದ್ರನ ಮನೆಯನ್ನು ತಲಪುವಷ್ಟರಲ್ಲಿ ದಿಗಿಲುಬಿದ್ದನು.

ಸುರೇಂದ್ರನ ಮನೆಯ ಬಾಗಿಲಲ್ಲೇ ಸುಶೀಲಾದೇವಿಯು ನಿಂತಿದ್ದಳು. ಪ್ರೇಮಚಂದನು ಸುಶೀಲೆಯನ್ನು ನೋಡಿದ ಕೂಡಲೇ, "ರಮೆಯು ಬಂದಳೇ?" ಎಂದು ಒಂದೇ ಉಸಿರಿನಿಂದ ಕೇಳಿದನು. "ಇಲ್ಲ. ನಿಮ್ಮ ಅಂಗಡಿಗೇ ಬಂದಿರಬಹುದಲ್ಲಾ", ಎಂದು ಸುಶೀಲೆಯು ಉತ್ತರಕೊಟ್ಟಳು. ಪ್ರೇಮಚಂದನು ಬೆವತುಬಿಟ್ಟನು. ತನ್ನ ವಾಲೆಗಳು ಕಳೆದುಹೋದ ಪಾಲಿಗೇ ಆದವೆಂದು ಹತಾಶನಾದನು. ರಮೆಯನ್ನೊಂದುಸಲ ಕಂಡರೆ ಅದರ ವಿಷಯವನ್ನು ತಿಳಿದು, ಬಿದ್ದುಹೋದ ಕಡೆಯಲ್ಲಿ ಹುಡುಕಿಸಬಹುದೆಂಬ ಕಡೆಯದೊಂದು ಆಶೆಯಿಂದ, ಅವನು ಬೇಗಬೇಗ ಅಲ್ಲಿಂದ ಹೊರಟು, ತನ್ನ ಸೇವಕರನ್ನು ಕರೆದು ರಮೆಯು ಎಲ್ಲಿದ್ದರೂ ಹುಡುಕಿ ಕರೆದುಕೊಂಡು ಬರಬೇಕೆಂದು ಅವರಿಗೆ ಹೇಳಿ, ಒಬ್ಬೊಬ್ಬ ಸೇವಕನನ್ನು ಒಂದೊಂದು ಕಡೆ ಕಳುಹಿಸಿದನು. ಮತ್ತು ತಾನೂ ಸಹ ಊರಿನಲ್ಲಿ ವಿಚಾರಿಸುತ್ತ ಹೋದನು. ಸ್ವಲ್ಪ ಹೊತ್ತು ಹುಡುಕಿ, ಹುಡುಕಲು ಹೋದ ಅಷ್ಟು ಜನರಲ್ಲಿ ಯಾರಾದರೊಬ್ಬರು ಹುಡುಕಿಕೊಂಡು ಬಂದಿರಬಹುದೆಂಬ ಆಶೆಯಿಂದ ತನ್ನ ಅಂಗಡಿಗೆ ಹೋದನು ಆದರೆ ಅವನ ಆಶೆಯು ಕೈಗೂಡಿರಲಿಲ್ಲ. ಅಲ್ಲಿಂದ ಪುನಃ ಸುರೇಂದ್ರನ ಮನೆಗೆ ಹೋದನು.

ಆಗ ಸುರೇಂದ್ರನು ಮನೆಯಲ್ಲೇ ಇದ್ದನು. ಆ ಮುಂಚೆಯೇ, ಸುಶೀಲೆಯು, ತಾನು ಸರಾಫ್ ಪ್ರೇಮಚಂದನ ವಾಲೆಯ ಜೋಡನ್ನು ರಮೆಯ ಮುಖಾಂತರ ತರಿಸಿದೆನೆಂದೂ, ನೋಡಿದ ಮೇಲೆ ಹಾಗೆಯೇ ಹಿಂತಿರುಗಿ ಅವಳ ಮೂಲಕವಾಗಿಯೇ ಕಳುಹಿಸಿದೆನೆಂದೂ, ಆಗಿನಿಂದ ರಮೆಯು ಎಲ್ಲಿಯೂ ಇಲ್ಲವೆಂದೂ, ಪ್ರೇಮಚಂದನು ಅವಳನ್ನು ಹುಡುಕಲು ಓಡಾಡುತ್ತಿದ್ದಾನೆಂದೂ ಹೇಳಿದ್ದಳು. ಅದಕ್ಕೆ ಸುರೇಂದ್ರನು–ಅಷ್ಟೇನು ಆತುರವಿತ್ತು ನಿನಗೆ? ವಾಲೆಗಳು ನೋಡಿದ ಕೂಡಲೆ ನಿನ್ನ ಹೊಟ್ಟೆ ತುಂಬಿತೇನು? ಅವಳು ಎಲ್ಲಾದರೂ ಕೆಡವಿಬಿಟ್ಟರೆ ಮಾಡುವದೇನು?" ಎಂದು ಸಿಡುಗುಟ್ಟಿದ್ದನು. ಸುಶೀಲೆಯು ತನ್ನ ತಪ್ಪನ್ನು ಒಪ್ಪಿಕೊಂಡಂತೆ ನಟಿಸುತ್ತ "ಹುಡುಗಿಗೆ ಅಷ್ಟು ಬುದ್ಧಿಯಿಲ್ಲವೇ?" ಎಂದು ಹೇಳಿದಳು.

ಪ್ರೇಮಚಂದನನ್ನು, ಸುರೇಂದ್ರನು ಕಂಡಕೂಡಲೆ. "ಸಿಕ್ಕಿದಳೇ?" ಎಂದು ಕೇಳಿದನು. ಆಶಾಭಂಗಿತನಾಗಿ ಸರಾಫನು, "ಇಲ್ಲ; ಇಲ್ಲಿಗೆ ಬಂದಿಲ್ಲವೇ? ಎಂದು ಕೇಳಿದನು. ಇಲ್ಲವೆಂದು ಸುರೇಂದ್ರನು ಉತ್ತರ ಕೊಟ್ಟನು. ಇಬ್ಬರೂ ಇನ್ನೂ ಹೆಚ್ಚಾಗಿ ದಿಗಿಲುಗೊಂಡರು. ಸುರೇಂದ್ರನು ಮನೆಯಿಂದ ಕೆಳಗಿಳಿದು ಪ್ರೇಮಚಂದನ ಸಂಗಡ ಹೋದನು. ಇಬ್ಬರೂ ಸ್ವಲ್ಪದೂರ ಹೋಗುವಷ್ಟರಲ್ಲಿಯೇ ರಮಾಕುಮಾರಿಯೇ ಚಿಕ್ಕದೊಂದು ಒಳ ರಸ್ತೆಯಿಂದ ತನ್ನ ಮನೆಯ ಕಡೆ ಬರುತ್ತಿದ್ದಳು. ಅವಳನ್ನು ಕಂಡು ಕೂಡಲೇ ಸುರೇಂದ್ರನು, "ಎಲ್ಲಿಗೆ ಹೋಗಿದ್ದೆ?" ಎಂದು ಕೇಳಿದನು.

ರಮೆ—ಭಾಗೀರಥಿಯ ಮನೆಗೆ ಚಿಕ್ಕತಾಯಿಯವರು ಕಳುಹಿಸಿದ್ದರು.

ಸುರೇಂದ್ರ – ಇವರ ವಾಲೆಯ ಜೋಡು ಏನಾಯಿತು?

ರಮ—ಚಿಕ್ಕತಾಯಿಯವರಲ್ಲೇ ಇದೆ. ಅದನ್ನವರು ಇಟ್ಟು ಕೊಂಡಿದ್ದಾರೆ.

ಸುರೇಂದ್ರ—ಸುಳ್ಳು ಹೇಳುತ್ತೀ! ಸರಾಫರಿಗೆ ಕೊಡಹೇಳಿ ತಿರುಗಿ ನಿನ್ನ ಕೈಯಲ್ಲೇ ಕೊಟ್ಟಿರುತ್ತಾಳಂತೆ.

ರಮೆ—ಇಲ್ಲ ಅಪ್ಪ. ಅವರೇ ಇಟ್ಟುಕೊಂಡಿದ್ದಾರೆ.

ಸುರೇಂದ್ರನು ಪ್ರತಿಭಟಿಸಿದನು. ಆದರೆ ಪ್ರೇಮಚಂದನು ಅವಳು ನಿಜವನ್ನೇ ಹೇಳುತ್ತಾಳೆಂದು ತಿಳಿದುಕೊಂಡನು. ತನ್ನ ಹೆಂಡತಿಯ ಮೇಲೆ ಸರಾಫನು ಸಂಶಯಪಟ್ಟಿರಬಹುದೆಂಬ ಭಾವನೆಯಿಂದ ಸುರೇಂದ್ರನ ಸಿಟ್ಟು ವಿಕೋಪಕ್ಕೆ ಹೋಯಿತು. ರಮೆಯ ಕಿವಿಯನ್ನು ಹಿಡಿದು ಒತ್ತುತ್ತ, "ಸುಳ್ಳು ಹೇಳುತ್ತೀ. ನಿಜವನ್ನು ಹೇಳು. ಎಲ್ಲಿ ಬಿಸಾಡಿ ಬಿಟ್ಟೆಯೆಂದು. ನಾವಾದರೂ ಹುಡುಕಿ ತೆಗೆಯುತ್ತೇವೆ" ಎಂದನು. ರಮೆಯು ಪುನಃ, "ಇಲ್ಲ, ಅಪ್ಪ ಚಿಕ್ಕಮ್ಮನವರೇ ಇಟ್ಟುಕೊಂಡಿದ್ದಾರೆ" ಎಂದಳು. ಸುರೇಂದ್ರನಿಗೆ ಏನು ಹೇಳಲೂ ತೋಚದಾಯಿತು. ರಮೆಯ ಸ್ವರದಲ್ಲಿ ನಿರಪರಾಧದ ಸ್ವಚ್ಛ ಧ್ವನಿಯಿತ್ತು. ಅವಳು ಹೇಳುವದೇ ನಿಜವಾಗಿರಬಹುದೆಂದು ಆಲೋಚಿಸಿದನು.

ಅವಳನ್ನೂ, ಸರಾಫ ಪ್ರೇಮಚಂದನನ್ನೂ, ಕರೆದುಕೊಂಡು

ಸುರೇಂದ್ರನು ಮನೆಗೆ ಹೊರಟನು. ವಿಷಯಗಳನ್ನು ವಿಚಾರಿಸುವ ಮೊದಲೇ, ತನ್ನ ಕೈಗಳನ್ನು ಮುಂದೆ ಚಾಚುವುದು ಇತರರಿಗೆ ಅನ್ಯಾಯ ವಾಗಿ ಕಾಣುವುದೆಂಬುದನ್ನು ಅವನು ಅರಿತಿದ್ದನು.

ಮನೆಗೆ ತಲಪುವಷ್ಟರಲ್ಲೇ, ಒಳಗಿನಿಂದ ಸುಶೀಲಾ ದೇವಿಯು, "ಹುಂ. ಬಂದಳು. ಎಲ್ಲಿಗೆ ಹೋಗಿದ್ದೆ, ಅವರ ವಾಲೆಯ ಜೋಡಿಗಳನ್ನು ತೆಗೆದು ಕೊಂಡು?" ಎಂದು ಕೂಗಿದಳು. ಅವಳ ಮಾತುಗಳನ್ನು ಕೇಳಿದ ಕೂಡಲೆ ರಮೆಯು ಭೀತಳಾದಳು. ತನ್ನ ತಂದೆಯು ಮಾತನಾಡಿದ್ದು ತನ್ನ ಚಿಕ್ಕತಾಯಿಯನ್ನು ವಿಚಾರಿಸದೆಯೇ ಆಗಿರಬೇಕೆಂದು ಅವಳ ಊಹೆಗೆ, ಈಗ ಬಹು ಕ್ರೂರ ಧಕ್ಕೆಯಾಗಿ ತಲೆತಿರುಗಿದಂತಾದಳು. ಸ್ವಪ್ನದಲ್ಲಿದ್ದವಳಂತೆ, "ನಿಮ್ಮ ಕೈಯಲ್ಲೇ ಕೊಡಲಿಲ್ಲವೇನವ್ವ?" ಎಂದು ಕೇಳಿದಳು. ಸುಶೀಲೆಯು, "ಏನು ಹೇಳುತ್ತಿ? ವಾಲೆಗಳನ್ನು ಎಲ್ಲೋ ಹಾಕಿಬಿಟ್ಟು ಕಾಣದೆ ಈಗ ನನ್ನ ಮೇಲೆ ಸುಳ್ಳುಹೇಳುತ್ತಿದ್ದೀಯ! ಸರಿ ಯಾದ ಬುದ್ಧಿಯನ್ನಿಟ್ಟುಕೊಂಡು ಮಾತನಾಡು. ಇಲ್ಲದಿದ್ದರೆ ಈ ದಿನ ಜೀವಸಹಿತ ಉಳಿಯುವುದಿಲ್ಲ. ನೋಡು, ಒಂದೆರಡು ರೂಪಾಯಿಯೇ ನಾವಾದರೂ ಕೊಡೋಣವೆಂದರೆ! ನಿನ್ನನ್ನು ನಂಬಿದ ನನ್ನನ್ನು ಕಷ್ಟ ಕ್ಕೀಡುಮಾಡಿಬಿಟ್ಟಿದ್ದೀಯೆ! ನಾನೀಗ ನಿನ್ನ ಬಾಯಲ್ಲಿ ಸಿಕ್ಕಿಬಿದ್ದಿದ್ದೇನೆ. ಒಂದು ಸಲ ನನ್ನನ್ನು ಬಿಡಿಸು, ತಾಯೆ! ನನ್ನವ್ವ! ನಂತರ ನಿನ್ನ ತಂಟೆಗೆ ಬರುವುದಿಲ್ಲ! ಕಡೆಗೆ ಹೇಗಾದರೂ ಸತ್ತುಕೊಳ್ಳುವಿಯಂತೆ! ನನಗೂ ಸಾಕುಸಾಕಾಯಿತು, ನಿನಿಗೆ ಬುದ್ಧೀ ಹೇಳಿ! ಎಷ್ಟೆಂದು ತಲೆಬಡಕೊಳ್ಳುವದು? ಅದು ಬೇಕು, ಮತ್ತೊಂದು ಬೇಕು, ಪುಣ್ಯಾತ್ಮಗಿತ್ತಿಗೆ ಊರಲ್ಲಿರುವ ಪ್ರತಿ ಒಂದು ವಸ್ತುವೂ ಬೇಕು! ಅವಳಿಗೆ ಬೇಡದಿದ್ದುದು ಯಾವದೂ ಇಲ್ಲ! ಕೊಟ್ಟರೆ ಮನೆ ಉಳಿಯುವುದಿಲ್ಲ! ಕೊಡದಿದ್ದರೆ ಮಲತಾಯಿಯ ಕಾಟ ವೆಂದು ಕೆಟ್ಟ ಹೆಸರು! ಹೋಗಲಿ ಬಿಡು! ನನಗೂ ಸಾಕಾಯಿತು! ಊರಿನವರೆಲ್ಲರಿಂದಲೂ, ನಿನ್ನಿಂದಾಗಿ ಬೈಸಿಕೊಂಡು! ಎಲ್ಲಾದರೂ ಬಾವಿ, ಕೆರೆ, ಬಿದ್ದು ಪ್ರಾಣಕಳೆದುಕೊಂಡರೆ, ಒಂದು ಸಲ ಸಾಕಾಗಿದೆ!! ನನಗೆ ಏನಿದು ಕಾಟ! ಇಂಥಾ ಮಹಾಕಾಳಿಯನ್ನು ನಾನೆಲ್ಲಿಯೂ ಕಾಣಲಿಲ್ಲವ್ವ!"

ಎಂದು ಮುಂತಾಗಿ ಕೂಗಾಡಲು ಸುರುಮಾಡಿದಳು. ಬಹು ಸಾಧುವೆಂದು ಹೆಸರುಹೊಂದಿದ ಅವಳ ಈ ಅವತಾರವನ್ನು ಕಂಡು ಶರಾಫ ಪ್ರೇಮ ಚಂದನು ಬೆರಗಾದನು.

ಸುರೇಂದ್ರನು ಹೆಂಡತಿಯ ಪಕ್ಷವನ್ನು ವಹಿಸಿಕೊಂಡು, ರಮೆಯ ಕೈ ಹಿಡಿದೆಳೆಯುತ್ತ, ಗುದ್ದುತ್ತ, "ಬಾ, ತೋರಿಸು! ಏನುಮಾಡಿದೆ ಯೆಂದು ಹೇಳು!" ಎಂದು ಒದರಲಿಕ್ಕೆ ಶುರುಮಾಡಿದನು. ರಮೆಯು ಮೂಕಳಂತಾದಳು. ಅವಳ ಜೇಬಿನಲ್ಲೇನಾದರೂ ಇರಬಹುದೆಂಬ ಸಂಶಯದಿಂದ ನೋಡಲು ಸುರೇಂದ್ರನು ಕೈಹಾಕಿದನು. ಅದರಲ್ಲಿದ್ದ ರೂಪಾಯಿಯನ್ನು ತೆಗೆದು ಕಣ್ಣಿನಿಂದ ಕಿಡಿಹಾರಿಸುತ್ತ, "ಇದೆಲ್ಲಿ ಸಿಕ್ಕಿತೇ? ಎಂದು ಗರ್ಜಿಸಿದನು. ರಮೆಯು, "ಅದನ್ನು ನನಗೆ ಚಿಕ್ಕಮ್ಮನವರೇ ಕೊಟ್ಟರು" ಎಂತ ಹೇಳಿದಳು. ಅಷ್ಟರಲ್ಲಿ ಸುಶೀಲೆಯು, "ಏನು? ಏನು? ನಾನೇ! ನಾನು ನಿನಗೇಕೆ ಒಂದು ರೂಪಾಯಿಯನ್ನು ಕೊಡುವೆನು? ಮನೆ ಯಲ್ಲಿ ಸಾಮಾನು ಇಲ್ಲವೆಂದೇ? ಯಜಮಾನರಿಂದ ಸಾಮಾನು ತರಲಾಗದ ಕಾಲಕ್ಕೆ ನಿನ್ನ ಕೈಗೆ ರೂಪಾಯಿ ಕೊಟ್ಟು ಕಳುಹಿಸುತ್ತೇನೆ. ಅದುವರೆಗೆ ನಿನ್ನ ಕೈಯಲ್ಲಿ ರೂಪಾಯಿಯನ್ನು ತಲೆಬಡೆದುಕೊಂಡರೂ ಕೊಡಲಾರೆ!" ಎಂದು ಮತ್ತೆ ಕೂಗಲು ಪ್ರಾರಂಭಮಾಡಿದಳು.

ಸುಶೀಲೆ-ಸುರೇಂದ್ರ ಇವರ ಮಧ್ಯೆ, ಆ ನಿರಪರಾಧಿ ಬಡ ಹುಡುಗಿಯು ಮರ್ದಿಸಲ್ಪಡುತ್ತಿರುವದನ್ನು ಕಂಡು ಪ್ರೇಮಚಂದನು ವ್ಯಥೆಗೊಂಡನು ತನ್ನ ವಾಲೆಯ ಜೋಡು ಹೇಗಿದ್ದರೂ, ಹೋದಲೆಕ್ಕಕ್ಕೇ ಎಂತ ನಿಶ್ಚಯಿ ಸಿದನು. ಅವನ್ನು ಹೇಗಾದರೂ ಉಪಾಯಾಂತರದಿಂದ ಪಡೆಯುಬಹು ದೆಂಬ ಆಶೆಯು ಲೇಶಮಾತ್ರವಿತ್ತು. ಅವರನ್ನು ಸಮಾಧಾನಪಡಿಸಿ ತಾನು ಅಲ್ಲಿಂದ ಹೋದರೆ, ಸುರೇಂದ್ರನು ಹೆಂಡತಿಗೆ ಬೆದರಿಸಿ ವಾಲೆಗಳನ್ನು ತೆಗೆದು ಕೊಂಡು ಏನಾದರೂ ನೆವದಿಂದ ಕೊಡಬಹುದೆಂದು ಭಾವಿಸಿದನು. ಹಾಗೆ ಭಾವಿಸಿ, "ತಾವು ಸುಮ್ಮನಿರಿ. ಅವಳು ಸಮಾಧಾನ ಹೊಂದಲಿ. ನಂತರ ನಯ, ನುಡಿಗಳಿಂದ ಅವಳ ಬಾಯಿ ಬಿಡಿಸಿರಿ. ಸುಮ್ಮನೆ ಹೊಡೆದರೆ ಪ್ರಯೋಜನವಿಲ್ಲ ಇನ್ನೂ ಸಣ್ಣ ಮಗುವಲ್ಲವೇ? ತಪ್ಪುಮಾಡಿರಲಿಕ್ಕೆ

ಸಾಕು. ಇನ್ನು ನಾನು ಹೋಗುತ್ತೇನೆ. ಸ್ವಲ್ಪ ಸಮಾಧಾನ ತಾಳಿರಿ" ಎಂದು ಹೇಳಿ ಅಲ್ಲಿಂದ ಹೊರಟುಹೋದನು.

ಅವನು ಹೋದಕೂಡಲೆ, ಸುಶೀಲಾದೇವಿಯ ಕೂಗು ಹತ್ತು ಪಾಲಾಯಿತು. ಅವಳ ಮಾತಿನಲ್ಲಿ ಸುರೇಂದ್ರನು ತನ್ನ ಮಾತುಗಳನ್ನು ಕೆಲವು ಹಾಕೋಣವೆಂದು ಎಷ್ಟು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ತಪ್ಪು ನಿಜವಾಗಿಯೂ ರಮೆಯದೇ ಆಗಿರಬೇಕೆಂದೂ, ಅವಳು ಮುಂಚಿನ ಅನೇಕ ವರ್ಷಗಳ ಅಭ್ಯಾಸದಿಂದ ತಾನು ನಿರಪರಾಧಿನಿ ಎಂಬ ಅಭಿಪ್ರಾಯವನ್ನು ಹುಟ್ಟಿಸುತ್ತಿದ್ದಳೆಂದೂ ಯೋಚಿಸಿದನು. ಆದುದರಿಂದ ಅವಳನ್ನೇ ಗದರಿಸಿ ಒಂದೆರಡು ಪೆಟ್ಟುಹೊಡೆದು, "ನೀನು ಮಾಲೆಯ ಜೋಡನ್ನು ತರುವವರೆಗೆ ಮನೆಯೊಳಗೆ ಕಾಲಿಡಕೂಡದು." ಎಂದು ಆಜ್ಞೆಯಿತ್ತು, ಅವಳನ್ನು ಮನೆಯಿಂದ ಹೊರ ನೂಕಿ ಬಾಗಿಲುಹಾಕಿದನು.

ತಂದೆಯ ಈ ಹೊಸ ವರ್ತನಕ್ಕೆ ರಮೆಯು ದಿಗಿಲುಗೊಂಡಳು ತನ್ನ ಚಿಕ್ಕ ತಾಯಿಯಲ್ಲಿದ್ದ ಮಾಲೆಯನ್ನು ತಾನು ಎಲ್ಲಿಂದ ತರುವುದೆಂದು ಯೋಚಿಸಿದಳು ಅಂತೂ ಅವಳ ಕೊನೆಗಾಲವು ಸಮಿಾಪಿಸಿದಂತೆ ಅವಳಿಗೆ ಕಂಡಿತು. ತನ್ನ ಮನೆಯಲ್ಲಿ ಪುನಃ ಕಾಲಿಡುವ ಹಕ್ಕನ್ನು ತಾನು ಕಳೆದು ಕೊಂಡೆನೆಂಬುದನ್ನು ಅವಳು ತಿಳಿದಳು. ತಂದೆಯ ನಿಷ್ಠುರ ವಚನಗಳು ಅವಳನ್ನು ಬಾಣದಂತೆ ತಿವಿದವು. "ಇನ್ನು ನಾನು ಜೀವಿಸಿ ಫಲವೇನು? ತನ್ನ ತಾಯಿಯು ಮೃತವಾದಂದಿನಿಂದ ಒಂದೇ ಒಂದು ದಿನ ಶಾಂತತೆಯೆಂಬುದನ್ನು ಅವಳು ತಿಳಿದಿದ್ದಿಲ್ಲ. ಲೋಕದಲ್ಲಿ ಎಲ್ಲರಿಗಿಂತಲೂ ತಾನು ಹೆಚ್ಚಿನ ಅದೃಷ್ಟಹೀನೆಯಾಗಿರುವೆನೆಂದು ಅವಳು ತಿಳಿದಿದ್ದಳು. ಕತ್ತಲೆಯಾದ ಮೇಲೆ ಬೆಳಕುಬರುತ್ತದೆಂಬುದು ಎಲ್ಲರಿಗೂ ಗೊತ್ತಾದ ವಿಷಯವಾಗಿತ್ತು. ಆದರೆ ಅವಳ ಪಾಲಿಗೆ ಅನಂತರ ಕತ್ತಲೆಯೇ ಬಂದಿದ್ದಿತು ಆ ಕತ್ತಲೆಯಿಂದ ಪಾರಾಗಿ ಬೆಳಕು ನೋಡುವದಕ್ಕೆ ಮರಣವೊಂದೇ ಉಪಾಯವೆಂದು ಆಕೆಯು ಭಾವಿಸಿದಳು.

೫

ಸುರೇಂದ್ರನು ಮಗಳನ್ನು ಹೊರದೂಡಿ ಬಾಗಿಲು ಒಳಗೆ ಹೋಗಿ, ಒಳಗೆ ಹೋದಮೇಲೂ ಸುಶೀಲೆಯ ಮಾತಿನ ರಭಸವು ಕಡಿಮೆಯಾಗಿರ

ಲಿಲ್ಲ. ಸುರೇಂದ್ರನಿಗೆ ಮನಸ್ಸಿನಲ್ಲಿ ಏನೋ ಕಳವಳವುಂಟಾದಂತಾಯಿತು. ತನ್ನ ಮಗಳನ್ನು ಹೊರತಳ್ಳಿ ಬಾಗಿಲು ಹಾಕಿದುದು ಅವನಿಗೆ ವಿಪರೀತವಾಗಿ ಕಂಡಿತು. ಕೂಡಲೆ ಹೋಗಿ ಬಾಗಿಲು ತೆರೆದರೆ ತನ್ನ ಚಂಚಲಬುದ್ಧಿಗೆ, ತನ್ನ ಹೆಂಡತಿಯು ಜರೆಯುವಳೆಂಬ ಹೆದರಿಕೆಯೂ ಇತ್ತು. ಬಹು ಹೊತ್ತು ಯೋಚಿಸಿದನು. ರಮೆಯು ನಿಜವಾಗಿಯೂ ನಿರಪರಾಧಿನಿಯಾಗಿದ್ದು, ತನ್ನ ಹೆಂಡತಿಯೇ ಅಪರಾಧಿನಿಯಾಗಿರಬಹುದೇ ಎಂಬೊಂದು ಸಂಶಯವು ಅಂದಿನವರೆಗೆ, ಅದೇ ಪ್ರಥಮತಃ ಅವನಿಗುಂಟಾಯಿತು. ಕೂಡಲೆ ತನ್ನ ಮಗಳಿಗಾಗಿ ವ್ಯಾಕುಲಗೊಂಡು ಯಾವುದೋ ಒಂದು ನೆವನದಿಂದ ಬಾಗಿಲು ತೆರೆದು ಹೊರಗೆ ಹೋಗಿ ನೋಡಿದನು. ಅಲ್ಲಿ ನೋಡಿದರೆ ರಮೆಯು ಇರಲಿಲ್ಲ. ಎಲ್ಲಿಗೆ ಹೋಗಿದ್ದಳವಳು? ವಾಲೆಯ ಜೋಡನ್ನು ತರುವುದಕ್ಕೇನು? ಎಂದು ಮುಂತಾದಾಗಿ ತನ್ನಷ್ಟಕ್ಕೆ ಪ್ರಶ್ನಿಸಿಕೊಂಡನು. ಆದರೆ ಇದನ್ನೆಲ್ಲಾ ಅವನು ನಂಬಲಿಲ್ಲ. ಅವಳು ನಿರಪರಾಧಿನಿಯೇ ಆಗಿರಬೇಕೆಂಬುದು ಈಗ ಅವನನ್ನು ಕಾಡಿಸಲು ಆರಂಭಮಾಡಿತು. ಸುರೇಂದ್ರನು ದಿಗಿಲುಬಿದ್ದನು. ಆ ಮುಂಚಿನ ಅನೇಕ ವರ್ಷಗಳಿಂದ ನಿದ್ರಿತವಾಗಿದ್ದ ಅವನ ಪುತ್ರೀವಾತ್ಸಲ್ಯವು ಈಗ ಜಾಗ್ರತವಾಯಿತು. ತನ್ನ ಮಗಳು ಒಂದುಸಲ ಮನೆಗೆ ಬಂದರೆ ಸಾಕೆಂದು ಹೇಳಿಕೊಂಡನು. ಅವಳ ಆ ದೀನ ಮುಖವು ಈಗ ಅವನ ಹೃದಯದಲ್ಲಿ ಪ್ರತಿಬಿಂಬಿತವಾಯಿತು. ತಾನು ಅವಳ ಸಲುವಾಗಿ ತಂದೆಯ ಧರ್ಮವನ್ನು ಆಚರಿಸಲಿಲ್ಲವೆಂಬುದನ್ನು ಈಗ ತಿಳಿದುಕೊಂಡನು. ಹಾಯ್! ಹಾಯ್! ಕಳೆದುಹೋದ ವರ್ಷಗಳು ಮರಳಿ ಬರುವುದಾದರೆ!! ತಾನು ನಿಷ್ಠುರತಂದೆಯಲ್ಲವೆಂದೂ, ಇನ್ನು ಮುಂದೆ ಹೆಂಡತಿಯ ಮಾಯಾಪಾಶಕ್ಕೆ ಬೀಳುವದಿಲ್ಲೆಂದೂ, ರಮೆಯ ಹತ್ತಿರ ಕ್ಷಮೆ ಬೇಡಿಕೊಳ್ಳುವೆನೆಂದೂ ಮನಸ್ಸಿನಲ್ಲಿ ನಿರ್ಧಾರಮಾಡಿದನು. ಈ ರೀತಿ ಸುರೇಂದ್ರನು ವ್ಯಾಕುಲದಿಂದ ಭ್ರಾಂತನಂತೆ ತನ್ನ ಮನೆಯ ಜಗಲಿಯ ಮೇಲೆ ಶತಪಥ ತಿರುಗಲು ಪ್ರಾರಂಭಿಸಿದನು. ನಿಮಿಷಗಳು ಸಂದವು! ಅರ್ಧಘಂಟೆ ಕಳೆಯಿತು! ರವಿಯು ಅಸ್ತಾಚಲಕ್ಕೆ ವಿಶ್ರಾಂತಿಗಾಗಿ

ಹೊರಡಲು ಉದ್ಯುಕ್ತನಾದನು. ಆದರೂ ರಮೆಯು ಬರಲಿಲ್ಲ ಸುರೇಂದ್ರನು ಆಯಾಸಗೊಂಡು ಒಳಗೆ ಹೋಗಿ ತನ್ನ ಹಾಸಿಗೆಯಲ್ಲಿ ಬಿದ್ದುಕೊಂಡನು.

ಹಾಗೆಯೇ ಸಾಧಾರಣ ಒಂದುಘಂಟೆಯು ಕಳೆದಮೇಲೆ, ಸುರೇಂದ್ರನ ಮನೆಯ ಹೊರಗೆ ಅನೇಕ ಜನರ ಗಲಾಟೆಯಾಯಿತು. ಅವರಲ್ಲೊಬ್ಬನು "ಬಾಬೂ ಮಹಾಶಯ,–ಬಾಬೂಜೀ–" ಎಂದು ಒದರುವ ಶಬ್ದವು ಒಳಗೆ ಮಲಗಿದ ದುಃಖೀಸುರೇಂದ್ರನ ಕಿವಿಗೆ ಬಿದ್ದಿತು. ಸುರೇಂದ್ರನು ಎದ್ದು ಹೊರಗೆ ಬಂದು ನೋಡಿದನು. ನೋಡಿ ತಲೆತಿರುಗಿತು. ನಾಲ್ಕಾರು ಜನರ ಮಧ್ಯೆ ಅವನ ಮಗಳಾದ ರಮೆಯು ಪ್ರಜ್ಞಾಹೀನಳಾಗಿ ಬಿದ್ದಿದ್ದಳು. ಅವಳ ಬಟ್ಟೆಯೆಲ್ಲವೂ ನೀರಿನಿಂದ ತೊಯ್ದು ಹೋಗಿ ಬಟ್ಟೆಯ ಕೆಲವು ಭಾಗಗಳು ರಕ್ತಮಯವಾಗಿದ್ದವು. ಸುರೇಂದ್ರನು ಮತ್ತೊಮ್ಮೆ ಕಣ್ಣುಬಿಟ್ಟು ಚೆನ್ನಾಗಿ ನೋಡಿದನು. ಹಾಯ್! ಅವಳ ತಲೆಯೊಡೆದು ಅದರಿಂದ ರಕ್ತವು ಧಾರೆಯಾಗಿ ಸುರಿಯುತ್ತಿದ್ದಿತು.

ಸುರೇಂದ್ರನು ಪ್ರಜ್ಞಾಹೀನನಾಗಿ ಅಲ್ಲೇ ಬಿದ್ದುಬಿಡುವಂತಾದನು. ಜನರು ಏನು ಹೇಳಿದರೆಂಬುದು ಅವನ ಕಿವಿಗೆ ಹೋಗಲಿಲ್ಲ. ಹುಡುಗಿಯು ಕೆರೆಗೆ ಬಿದ್ದಳೆಂದೂ, ಅವಳು ಬಿದ್ದ ಸ್ಥಳದಲ್ಲಿ ಕಲ್ಲುಗಳಿದ್ದುದರಿಂದ ಅವಳಿಗೆ ಕಠಿಣ ಗಾಯಗಳಾಗಿವೆಯೆಂದೂ, ಆ ಸಮಯದಲ್ಲಿ ಸ್ನಾನ ಮಾಡುತ್ತಿದ್ದ ಒಬ್ಬ ವ್ಯಕ್ತಿಯು ಅವಳನ್ನು ಮೇಲಕ್ಕೆ ತಂದುಹಾಕಿದನೆಂದೂ ಮಾತ್ರ ಅವನಿಗೆ ತಿಳಿಯಿತು. ಸುರೇಂದ್ರನು ಭ್ರಾಂತನಾದುದರಿಂದ ಗಲಾಟೆಯ ಕಾರಣವನ್ನು ತಿಳಿಯಲು ಬಂದ ಸುಶೀಲೆಯ ವಶಕ್ಕೆ ರಮೆಯನ್ನೊಪ್ಪಿಸಿದರು. ರಮೆಯ ಅವಸ್ಥೆಯನ್ನು ಕಂಡು ಸುಶೀಲೆಯು, "ಹೂಂ, ಇದನ್ನೂ ಒಂದು ಮಾಡಿಕೊಂಡೇನವ್ವ? ಎಂದು ಹೇಳಿ, ಜನರು ತನ್ನ ಮೇಲೆ ಅಪವಾದ ಹೊರಿಸ್ಯಾರೆಂಬ ಭಯದಿಂದ, ಆದಷ್ಟು ಪ್ರೇಮವನ್ನು ನಟಿಸುತ್ತ ರಮೆಯನ್ನು ಒಳಗೆ ಎತ್ತಿಕೊಂಡು ಹೋಗಿ ಹಾಸಿಗೆಯಲ್ಲಿ ಮಲಗಿಸಿದಳು.

ಸುರೇಂದ್ರನು ಶ್ರೇಷ್ಠ ಡಾಕ್ಟರರ ಕಡೆಯಿಂದ ರಮೆಗೆ ಔಷಧೋಪ

ಚಾರ ನಡೆಸಿದ್ದನು. ಆದರೆ ರಮೆಗೆ, ಹೆದರಿಕೆಯಿಂದಲೂ, ಗಾಯ ಗಳಿಂದಲೂ ಉಂಟಾದ ಜ್ವರವನ್ನು ಅವರಿಂದ ಇಳಿಸಲಾಗಲಿಲ್ಲ. ಅವಳು ಕೆರೆಗೆ ಬಿದ್ದ ದಿನದಿಂದ ಬಂದ ಜ್ವರವು ಇಳಿಯಲೇ ಇಲ್ಲ. ಯಾವಾಗಲೂ ಜ್ವರವು ಇದ್ದೇ ಇರುತ್ತಿತ್ತು. ಅವಳ ತಲೆಗೆ ಮಾತ್ರವಲ್ಲ, ಎದೆಗೂ ಪೆಟ್ಟು ತಗಲಿತ್ತೆಂದೂ, ಅದರಿಂದ, 'ನ್ಯುಮೋನಿಯಾ' ಸುರು ಆಗಿತ್ತೆಂದೂ ಡಾಕ್ಟ ರರು ಹೇಳಿದ್ದರು. ಈ ಮಾತುಗಳನ್ನು ಡಾಕ್ಟರರು ಸುರೇಂದ್ರನ ಹತ್ತಿರ ಬಹು ಮೆಲ್ಲಗೆ ಹೇಳಿದ್ದರೂ ರಮೆಯು ಕೇಳಿಬಿಟ್ಟಿದ್ದಳು. ಡಾಕ್ಟರರು ಹೋದಕೂಡಲೆ ರಮೆಯು, ಸುರೇಂದ್ರನನ್ನು ಕುರಿತು, 'ನೀವಿನ್ನು ಡಾಕ್ಟರ ರನ್ನು ಸುಮ್ಮನೆ ಕರೆಯಿಸಬೇಡಿ, ಪ್ರಯೋಜನವೇನೂ ಆಗಲಾರದು' ಎಂದಳು. ಅಷ್ಟು ಚಿಕ್ಕ ಹುಡುಗಿಯ ಬಾಯಲ್ಲಿ ಅಂತಹ ಮಾತುಗಳು ಬಂದುದು ಸುರೇಂದ್ರನಿಗೆ ಆಶ್ಚರ್ಯವಾಯಿತು. ಸುರೇಂದ್ರನು, "ಬರಲಿ ಮಗೂ, ಅವರು ಕೊಟ್ಟ ಔಷಧಿಯನ್ನು ಕುಡಿ! ದೇವರು ನಿನಗೆ ಗುಣ ಪಡಿಸುತ್ತಾನೆ" ಎಂದನು.

ರಮೆಯು ಸುಮ್ಮನಾದಳು. ಮೆಲ್ಲಗೆ ಅತ್ತಿತ್ತ ತಲೆತಿರುಗಿಸಿ ನೋಪಿನ ದೆಸೆಯಿಂದ ಮೆಲ್ಲಗೆ ನರಳುತ್ತ, ತಂದೆಯನ್ನು ಕುರಿತು, "ನಾನು ಈ ಲೋಕಕ್ಕಿಂತಲೂ, ಉತ್ತಮ ಲೋಕಕ್ಕೆಹೋಗುತ್ತೇನಪ್ಪ! ಅಲ್ಲಿ ಡಾಕ್ಟರರ ಆವಶ್ಯಕತೆಯಾಗಲಿ, ಔಷಧಿಗಳ ಕಾಟವಾಗಲಿ ಇರುವುದಿಲ್ಲ" ಎಂದಳು.

ರಮೆಯ ಮಾತುಗಳಿಂದ ಸುರೇಂದ್ರನ ಗಂಟಲು ಕಟ್ಟಿದಂತಾಯಿತು. ಸುರೇಂದ್ರನು ಕೂಡಲೆ ಅವಳನ್ನು ತಬ್ಬಿಕೊಂಡು, "ಮಗೂ, ನನ್ನ ತಪ್ಪಾ ಯಿತು, ನೀನೊಂದು ಸಲ ಗುಣಹೊಂದು, ನಂತರ ನಿನ್ನನ್ನು ದೇವರಂತೆ ಪೂಜಿಸುತ್ತೇನೆ" ಎಂದು ಬಿಕ್ಕಿ ಬಿಕ್ಕಿ ಅಳಲಿಕ್ಕೆ ಪ್ರಾರಂಭಮಾಡಿದನು. ರಮೆಯು ತನ್ನ ಕಣ್ಣೀರೆಲ್ಲವನ್ನು ಮೊದಲೇ ಅತ್ತು ತೀರಿಸಿದ್ದಳಾದ್ದರಿಂದ ಈಗ ಆವಳ ಮುಖದಲ್ಲಿ ಶಾಂತತಾಕಳೆಯು ಮಾತ್ರ ಇತ್ತು. ಅವಳು "ಕಣ್ಣೀರಿಡಬೇಡಿ ಅಪ್ಪ! ಮುಖ್ಯತಃ ನಾನು ಅದೃಷ್ಟಹೀನೆ! ನಿಮ್ಮಂತಹ ತಂದೆಯಿದ್ದು ನಾನು ದುಃಖೀಯಿರಬೇಕಾದುದು ನನ್ನ ಪೂರ್ವ ಕರ್ಮದ ಫಲವಲ್ಲದೆ ಬೇರೊಂದಲ್ಲ" ಎಂದಳು.

ಬಹುದುಃಖೀ ಸುರೇಂದ್ರನ ಹೃದಯದಲ್ಲಿ ಗುಡುಗು, ಮಿಂಚು, ಭೋರ್ಗರೆಯುತ್ತಿದ್ದವು. ಸುರೇಂದ್ರನಿಗೆ ರಮೆಯು ಬದುಕುವ ಆಶೆಯು ಕಂಡುಬರಲಿಲ್ಲ. ಅವಳು ಮಗುವಾದುದರಿಂದ ಸುಂದರ ವಸ್ತುಗಳನ್ನೆಲ್ಲಾ ಅವಳಿಗೇ ಕೊಟ್ಟು ಬಿಟ್ಟರೆ ಅವಳು ಜೀವಿಸಬಹುದೆಂದು ಭಾವಿಸಿ, ಸುರೇಂದ್ರನು ಹೆಂಡತಿಯ ಹತ್ತರ ಹೋಗಿ, "ನಿನ್ನ ಪೆಟ್ಟಿಗೆಯ ಬೀಗದ ಕೈಯನ್ನು ಕೊಡು" ಎಂದು ಕೇಳಿದನು. ಸುರೇಂದ್ರನ ಈ ಮಾತು ಅವಳನ್ನು ದಿಗಿಲನ್ನುಂಟುಮಾಡಿತು. ಇತರ ಸಮಯದಲ್ಲಾದರೆ ಸುಶೀಲೆಯು ಹೆದರುತ್ತಿರಲಿಲ್ಲ. ಸುಶೀಲೆಯು 'ಏಕೆ' ಎಂದು ಕೇಳಿದಳು. ಸುರೇಂದ್ರನು, 'ಬೇಕು, ಕೊಡು' ಎಂದು ಗದರಿಸಿದನು. ಸುಶೀಲೆಯು ಅತ್ತಿತ್ತ ಹುಡುಕಿದಂತೆ ಮಾಡಿ, 'ಇಂತಹ ಹೊತ್ತಿನಲ್ಲೇ ಕಾಣುವುದಿಲ್ಲ. ಈ ಗಲಾಟೆಯಲ್ಲಿ ಎಲ್ಲಿ ಬಿದ್ದುಹೋಯಿತೋ?' ಎಂದಳು. ಸುರೇಂದ್ರನು ಹುಚ್ಚನಂತಾದನು. ಅಲ್ಲೇ ಒಂದು ಮೂಲೆಯಲ್ಲಿ ಒಂದು ಕತ್ತಿಯಿತ್ತು. ಅದನ್ನು ಬೇಗನೆ ತೆಗೆದುಕೊಂಡು ಅತಿ ಅವಸರದಿಂದ ಸುಶೀಲೆಯ ಪೆಟ್ಟಿಗೆ ಇದ್ದಲ್ಲಿ ಹೋಗಿ ಅದರ ಬಾಗಿಲನ್ನು ಒಡೆದು ತೆಗೆದನು. ಆ ಪೆಟ್ಟಿಗೆಯು ಮರದ್ದಾಗಿದ್ದುದರಿಂದ ಅದನ್ನು ಒಡೆಯಲಿಕ್ಕೆ ಹೆಚ್ಚು ಕಷ್ಟವಾಗಲಿಲ್ಲ. ಜ್ವರದಲ್ಲಿದ್ದವನಂತೆ ಸುರೇಂದ್ರನು ಪೆಟ್ಟಿಗೆಯಲ್ಲಿ ಎಲ್ಲಕ್ಕೂ ಮೊದಲಿದ್ದ ಒಂದು ಜರದ ಸೀರೆಯನ್ನು ತೆಗೆದು ಕೆಳಗೆಹಾಕಿದನು. ಅದರಡಿಯಲ್ಲಿಯೇ ಇದೇನು? ವಜ್ರದ ವಾಲೆಯ ಜೋಡು ಇದ್ದಿತು! ವಾಲೆಗಳನ್ನು ತೆಗೆದು ನೋಡಿದನು, ಸುಶೀಲೆಯು ಅವನ ಹಿಂದೆಯೇ ಬಂದು ನಿಂತಿದ್ದಳು. ಸುರೇಂದ್ರನಿಗೆ ಈಗ ಎಲ್ಲವೂ ಸಂಪೂರ್ಣವಾಗಿ ತಿಳಿಯಿತು. ತನ್ನ ಹೆಂಡತಿಯೇ ಮೋಸಪಡಿಸಿ ತಪ್ಪನ್ನು ನಿರಪರಾಧಿ ರಮೆಯ ಮೇಲೆ ಹೊರಿಸಿ ಅವಸರದಿಂದ ವಾಲೆಗಳನ್ನು ತನ್ನ ಪೆಟ್ಟಿಗೆಯಲ್ಲಿಯ ಸೀರೆಯ ಬುಡಕ್ಕೆ ಇಟ್ಟಿದ್ದಳೆಂದು ಊಹಿಸಿದನು. ವಾಲೆಯ ಜೋಡನ್ನು ತೆಗೆದು ಕೊಂಡು ಸುಶೀಲೆಯ ಮುಖದ ಹತ್ತರ ಹಿಡಿದು, "ಇದೆಲ್ಲಿಯದು?" ಎಂದು ಕೂಗಿದನು. ಸುಶೀಲೆಯು, "ನನಗೊಂದೂ ತಿಳಿಯದು, ಅವಳೇ ಇಷ್ಟು ಸಂಶಯವು ನನ್ನ ಮೇಲೆ ಬೀಳುವಂತೆ ಮಾಡಿರಬಹುದು. ಪೆಟ್ಟಿಗೆಯ ಬೀಗದ ಕೈಯೂ ನನ್ನ ಹತ್ತರ ಕಾಣುವುದಿಲ್ಲ" ಎಂದಳು.

ಸುರೇಂದ್ರನಿಗೆ ಸುಶೀಲೆಯ ಚಾಂಡಾಲತನವು ಈಗ ಹೊಳೆಯಿತು. ದೇವಿಯಂತಿದ್ದ ರಮೆಯ ಮೇಲೆ, ಅವಳೇ ದುಷ್ಟ ಕುಬುದ್ಧಿಯನ್ನು, ಇಂದಿನವರೆಗೂ ನಡೆಸುತ್ತಿದ್ದಳೆಂದು ಈಗ ಸುರೇಂದ್ರನಿಗೆ ತಿಳಿಯಿತು. ತಾನೂ ಆ ರಾಕ್ಷಸಿಯಂತೆ ಕುಣಿದು ತನ್ನ ಮಗಳಿಗೆ ಎಂತಹ ಕಷ್ಟ ಕೊಟ್ಟೆನೆಂದು ಪಶ್ಚಾತ್ತಾಪಬಿಟ್ಟನು.

ಸುರೇಂದ್ರನು ಮತ್ತಷ್ಟು ಭ್ರಾಂತನಾದನು. ಪೆಟ್ಟಿಗೆಯ ವಿಷಯವನ್ನು ಸಂಪೂರ್ಣವಾಗಿ ಮರೆತು ರಮೆಯ ಬಳಿ ಓಡಿಹೋಗಿ, 'ಮಗೂ, ಸರ್ವಾಪರಾಧವಾಯಿತು, ಕ್ಷಮಿಸು! ಸರ್ವ ತಪ್ಪೂ ಆ ಹೊಲತಿಯದು!' ಎಂದು ಕೂಗುತ್ತ ತಬ್ಬಿಕೊಂಡನು. ಸುರೇಂದ್ರನ ಕೈಯಲ್ಲಿದ್ದ ವಾಲೆಯ ಜೋಡನ್ನು ರಮೆಯು ನೋಡಿದಳು. ತನ್ನ ನಿರಪರಾಧವು ಪ್ರತ್ಯಕ್ಷವಾಗಿ ಕಂಡುಬಂದುದಕ್ಕೆ ಅವಳ ಸಂತೋಷವು ಅಪಾರವಾಯಿತು. ತಂದೆಯನ್ನು ಸಮಾಧಾನ ಪಡಿಸಲಿಕ್ಕೆ ಅವಳು ಯತ್ನಿಸಿದಳು. ಆದರೆ ಬಾಯಿತೆರೆಯುವ ಚೈತನ್ಯವಾಗಲಿ, ನಾಲಿಗೆಯನ್ನು ಚಲಿಸುವ ಚೈತನ್ಯವಾಗಲಿ, ಯಾವದೂ ಅವಳಿಗೆ ಇರಲಿಲ್ಲ.

ಸುರೇಂದ್ರನು ರಮೆಯ ಶರೀರವನ್ನು ತಬ್ಬಿಕೊಂಡು, "ಕ್ಷಮಿಸು! ಮಗೂ ಸರ್ವಾಪರಾಧವಾಯಿತು! ಎಂದು ಕೂಗಿದನು. ಅವನ ರೋದನವು ಕೋಣೆಯಲ್ಲಿ ಪ್ರತಿಧ್ವನಿಯಾಗಿ ವಾಯುವಿನಲ್ಲಿ ಸೇರಿಹೋಯಿತು. ಸುರೇಂದ್ರನು ಬೆವತುಬಿಟ್ಟನು. ಅವನ ಕೈಗಳಲ್ಲಿ ರಮೆಯ ಆತ್ಮಹೀನ ಜಡದೇಹವು ಮಾತ್ರವಿದ್ದಿತು. ಅವಳ ಆತ್ಮವು ಆ ಕ್ಷಣಿಕ ದೇಹಪಂಜರವನ್ನು ಬಿಟ್ಟು ಅನಂತದಲ್ಲಿ ಸೇರಿಹೋಯಿತು!!!

X X X X X

ಸುರೇಂದ್ರನಿಗೆ ಈ ಲೋಕವೇ ಶೂನ್ಯಮಯವಾದಂತೆ ತೋರಹತ್ತಿ ಈ ಪ್ರಪಂಚವೇ ಸೇರದಾಗಿ ಎತ್ತೋ ಹೋಗಿಬಿಟ್ಟಿದ್ದಾನೆ

X X X X X

ವಾಲೆಯ ಜೋಡನ್ನು ಪ್ರೇಮಚಂದನು ಸುಶೀಲೆಯ ಮೇಲೆ ಫಿರ್ಯಾದೋ ಏನೋ ಮಾಡಿ ತರಿಸಿಕೊಂಡನಂತೆ!

# ಏಕೆ ?

●

ದೇವ ಜಗದೋದ್ಧಾರ,
ಎನ್ನ ಮನಸನಧೀರ-
ಗೊಳಿಸಿ ಚಂಚಲಿಸಿ ನೀ ಕಾಡುತಿಹೆಯೇಕೆ?
ಕಂಡು ಕಾಣಿಸದಂತೆ,
ಮಿರುವ ತಾರಗೆಯಂತೆ
ಎನ್ನ ಮನ ಬನ್ನಬಡಿಸುವೆ ನೀನದೇಕೆ?
ಭಾವಸಾಮ್ರಾಜ್ಯದಲಿ,
ಮನ್ಮನೋರಾಜ್ಯದಲಿ,
ಅಲೆಯುತಿರೆ ಕುಲುಕಿಸುವುದೆನ್ನ ಮನವೇಕೆ?
ಜೀವನರಣಾಂಗಣದಿ,
ಕಾದುತಿರೆ ದಿನದಿನದಿ,
ಹಲವುವಿಧ ಹಂಬಲವ ತಂದೀವೆಯೇಕೆ?
ಸುಖದ ಸ್ವಪ್ನವ ಕಂಡು,
ಕಳೆಯುತಿರೆ ದಿನವೊಂದು,
ದುರ್ಘಟ ಪ್ರಸಂಗತಂದೊದಗಿಸುವುದೇಕೆ?
ಎನ್ನ ಮನದನ್ನೆಯೊಡ-
ಲೆನ್ನ ಮನವಿರೆ ನೋಡ-
ಲಾಗ ಮತ್ತೊಂದು ಕುತ್ತವ ನೀವೆಯೇಕೆ?
ಜನನವೆಂಬಾ ಮಾತು
ಕೇಳುತಿರಲಾತತೂ-
ಕ್ಷಣಮರಣವಾರ್ತೆ ನೀ ಹರಡಿಸುವುದೇಕೆ?
ಒಂದು ಕಡೆ ಸುಖವೆಂದು,
ಕೇಳುತಿರೆ ಮತ್ತೊಂದು,
ಕರೆಯು ಕೇಳಿಸುವೆ ಬಲುದುಃಖವೆಂದೇಕೆ?

ಈಗ ಕಂಡಾ ಸಖನ,
ಮತ್ತೊಂದುಕ್ಷಣ ಜವನ,
ರಾಜ್ಯಕಟ್ಟುವ ಅಟ್ಟಹಾಸ ನಿನಗೇಕೆ?
ರಾಜಸಿಂಹಾಸನದಿ,
ರಾಜಿಸಿದ ಮರುಕ್ಷಣದಿ,
ತಿಪ್ಪೆಯಲಿ ಕುಳ್ಳಿರಿಪ ಹವ್ಯಾಸವೇಕೆ?
ತಿರುಪೆಯೆತ್ತುವ ಬಡವ-
ಗಿತ್ತು ಧನಸಂಪದವ
ಕುಣಿಸುತಿಹ ಗೊಂಬೆಯಾಟದ ಕಪಟವೇಕೆ?
ಒಬ್ಬನೊಲುಮೆಯ ಒಡವೆ
ಮತ್ತೊಬ್ಬನಿಗೆ ಕೊಡುವೆ,
ಕೊಟ್ಟು ಕಸಗೊಂಡು ಕೈಬಿಡುವೆ ನೀನೇಕೆ?
ಏಕಕಾಲದೊಳಿಂತು,
ವಿವಿಧ ವಿಧಗಳನಾಂತು
ತೋರಿಸುವ ಮರಿಮಕ್ಕಳಾಟಿಕೆಯಿದೇಕೆ?
ಮನದಿ ನಿನ್ನಯ ಧ್ಯಾನ,
ರಸನೆಯಲಿ ಗುಣಗಾನ-
ವಿರುವಂದು ಚಿತ್ತಚಂಚಲಗೊಳಿಪೆಯೇಕೆ?
ನಾನರಿಯೆ ನಿನ್ನ ಮನ-
ದಿಂಗಿತವ ಜಗದ ಜನ-
ರಾಡುವರು ಕಪಟನಾಟಕಸೂತ್ರಧಾರ!
ನೀನೆಂದವಿಶ್ರಾಂತ
ಶೋಧಿಸಲು ಜಗದಂತ
ರಂಗನಾಟಕದಿ ನಾನೇ ಪಾತ್ರಧಾರ!!

ಕಾಪು ಮಂಜುನಾಥ ಶೆಣ್ಯೆ.

# ಹಳ್ಳೀ ಮನೆವಾರ್ತೆ!

## (ಶಿರ್ವ, ಹಳ್ಳೀಕೂಟದಿಂದ)

[ದೀಪಾವಳೀ ದಿನ; ಬೆಳೆಯೂರ ದೂಮಣ್ಣನ ಮನೆಯೆದುರ ಅಂಗಳ. ಬೆಳಿಗ್ಗೆ ಆರು ಘಂಟೆಯ ಸಮಯ; ಅಂಗಳವು ತುಂಬಿತ್ತು; ಜೀವಕಳೆಯಿಂದ ಕೂಡಿತ್ತು!]

ಹಳ್ಳಿಗರು:—(ತಮ್ಮ ತಲೆಮೇಲ ಗೋಣಿಚೀಲಗಳ ಮೂಟೆಯನ್ನು ಅಂಗಳದಲ್ಲಿ ಬಿಸುಟು) ಕಿಣಿಯರೂ ಬಂದರು. ಇನ್ನೂ ಭತ್ತ ಸರಿಮಾಡಿ ಆಗಲಿಲ್ಲವೇ? ನಮಗೆ ಹೆಚ್ಚು ಹೊತ್ತು ನಿಲ್ಲಲು ಸಾಧ್ಯವಿಲ್ಲ.

ರಾಮು:—(ಮನೆಯ ಮುದಿ ಹೆಂಗ್ಸು) ಕಿಣಿಯರುಗಿಣಿಯರು! ಬಂದರೆ ಹೋಗುತ್ತಾರೆ; ನಾವೇನು ಅವರನ್ನು ಔತಣಕ್ಕೆ ಕರೆದಿಲ್ಲ. ದೊಡ್ಡಸ್ಥಿಕೆ ತಲೆತುಂಬಾ ಆದರೆ ಇದೇ ಪೇಚಾಟ! ಮಾರಾಯನಿಗೆ ಹಬ್ಬ ಹವನಗಳ ನೆನಪಾದರೂ ಬೇಡವೇ? ನಮ್ಮ ಹುಡುಗನಿಗೆ ಎಷ್ಟೋ ಹೇಳಿದೆ. ಚಂದ್ರನಾಯ್ಕರಲ್ಲಿಂದ ಉಪ್ಪು ರಾಗಿ ತರುವಾ ಎಂದು. ಒಪ್ಪಲಿಲ್ಲ, ಇವರು ಅಂಥವರು ಇಂಥವರು ಎಂದು ಜಾಯಿಮಾಡಿದ. ಈಗ ಊರಿಗೇ ಗೊತ್ತಾಯಿತಲ್ಲ ಸ್ವರೂಪ! ಅಂಗ್ಡಿಗೆ ಹೋದರೆ ಪುಡಿ ಉಪ್ಪು, ಕಲ್ಲು ರಾಗಿ, ಹಾಳಾದ ಹುರುಳಿ ಇವನ್ನೂ ಒಂದಕ್ಕೆ ನಾಲ್ಕರಂತೆ ಹೇರಿ ಕಳುಹುವುದು; ನಂತ್ರ ಹಬ್ಬವೆಂದಿಲ್ಲ; ಹವನವೆಂದಿಲ್ಲ; ಮದುವೆ ಮುಂಜಿಯೆಂದಿಲ್ಲ. ಗೋಣಿ ಹಿಡಿಸಿ ಓಡಿಬರುವುದು—ಅಪ್ಪನ ಆಸ್ತಿಯು ಹುಟ್ಟುವಳ್ಳೀ ವಸೂಲಿಗೆ!

ದೂಮಣ್ಣ:—ಅಮ್ಮಾ-ಸಾಕುಮಾಡು. ಅವರೂ ಬಂದರಲ್ಲಿ. ಹೆಂಗು ಸರಿಗೆ ಎಷ್ಟೊಂದು ಹರಟೆ! ಇದ್ದುದನ್ನು ಬೇಯಿಸಿ ಮುಸುರೆ ತೊಳೆಯುವುದನ್ನು ಬಿಟ್ಟು ಬಾಯಿತುಂಬಾ ಬಗುಳಾಟಮಾಡುವುದು. (ಈಕಡೆ ತಿರುಗಿ) ಅವರಿಗೇನು ಬಿದ್ದು ಹೋಗಿದೆ? ನಾಲ್ಕು ಮಂದಿಯೊಡನೆ ಕೂಡಿ ಅಗಲುವವರು ನಾವಿದ್ದೇವಲ್ಲಾ! ಇವರೊಡನೆ ಯಾರು ಕೇಳುತ್ತಾರೆ?

ರಾಮು:— ಯಾಕೆ ಕೇಳುತ್ತೀ? ಕೇಳಿ ಕೇಳಿ ಇದ್ದ ನಗನಾಣ್ಯಗಳೂ ಮರಮಟ್ಟುಗಳೂ ಮಾರಿಹೋದುವು. ಇನ್ನು ನನ್ನೊಡನೆ ಕೇಳದೆ ಕೊಡು

ವಂಥಾ ನಿನ್ನ ದೇಹವನ್ನು ಮಾರಿಬಿಟ್ಟರಾಯಿತು. ಹಟ್ಟಿಯೂ ಬರಿದಾ ಯಿತು. ಹೆಂಡ್ತಿಗೆ ಮೂಗುತಿ ಮಾತ್ರ ಉಳಿದಿದೆ. ಇದನ್ನೆಲ್ಲ ಯಾರೊಡನೆ ಹೇಳುವುದು! (ಹಣೆ ಮುಟ್ಟಿಕೊಂಡು ಸಿಟ್ಟಿನಿಂದ ಒಳಹೋಗುವಳು)

ದೂಮಣ್ಣ:—ನನಗೇನು ಜೂಜು ಜುಗಾರಾಟಗಳಿವೆಯೇ? ಮರ್ಯಾದೆಗೋಸುಗ ಪೇಚಾಡುತ್ತಿದ್ದೇನೆ. (ಹಳ್ಳಿಗರನ್ನು ನೋಡಿ) ಈಗಿರುವ ಇನ್ನೂರು ಮುಡಿಯಕ್ಕೀ ಹುಟ್ಟುವಳಿಯು ಕಂಬಳಕ್ಕೂ, ಅವಲಕ್ಕಿ ತಿನ್ನುವರೆಯೂ ಸಾಕಾಗದು. ನನ್ನ ಆಯುಷ್ಯವು ಮರ್ಯಾದೆಯಿಂದ ಇದೇ ರೀತಿ ಸಾಗೀತು. ಆಟದವರು, ಕೂಟದವರು, ಬರುವವರು, ಹೋಗುವವರು ಎಂದು ಹೇಳುವಾಗ ಏನಾಗುತ್ತದೆ, ಎಷ್ಟಾಗುತ್ತದೆ ಎಂಬ ತಿಳುವಳಿಕೆಯು ಬಳೆತೊಡುವ ಹೆಂಗಸರಿಗೇನು ಗೊತ್ತು? ಕಳೆದ ವರ್ಷ ದೊಡ್ಡ ಕಲೆಕ್ಟರ ಧೊರೆಗಳು ನಮ್ಮಾ ಹಳ್ಳಿಗಾಡಿಗೆ ಬಂದಾಗ ಬರೇ ಮೂರು ದಿವ್ಸದ ಎಡೆಯಲ್ಲಿ ಹತ್ತು ಮೈಲುದ್ದದ ರಸ್ತೆಯನ್ನೂ ಒಂದೂವರೆ ಫರ್ಲಾಂಗು ವಿಸ್ತೀರ್ಣದ ಕಡೆಕಟ್ಟಿನ ಚಪ್ಪರವನ್ನೂ ಮಾಡಿಸಲಿಕ್ಕೇ ಸಾವಿರಾರು ರೂಪ್ಯಾ ಖರ್ಚಾಯಿತೆಂಬುದು ನಿಮಗೆಲ್ಲ ಗೊತ್ತಿದೆಯಷ್ಟೆ! ಅಂಥಾ ಕೆಲ್ಸ ಇನ್ನು ನನ್ನ ಜೀವಮಾನದಲ್ಲೇ ಸಾಧ್ಯವಿಲ್ಲ. ಕಳೆದ ವರ್ಷ ಆದ ನನ್ನ ಅಳಿಯನ ಹೆಂಡ್ತಿ ಬಯಕೆಯ ದಿವ್ಸದ ಕೋಳಿ ಅಂಕದಲ್ಲಿ ಕೋಳಿಯ ಚೂರೀ ತಿವಿತದಿಂದ ಚಾಪೆ ಹಿಡಿದ ಐದು ಮಂದಿಗೆ ಇಂದಿಗೂ ಏಳ್ಗೆಯಿಲ್ಲವೆಂದರೆ, ಅವರಿಗೋಸುಗ ಅಂದಿನಿಂದ ತಿಂಗಳಿಗೆ ಎರಡೆರಡು ಮುಡಿ ಅಕ್ಕಿ ಸಲ್ಲುತ್ತಿದೆ ಎಂದರೆ, ಮರ್ಯಾದೆಗಾಗಿ ಎಷ್ಟೊಂದು ಕಷ್ಟಪಡಬೇಕಾಗುತ್ತದೆಂದು ತಿಳಿಯುತ್ತದೆ.

ಕಿಣಿಯರು:—(ಹತ್ತಿರ ಬಂದು) ಏನು ಅಣ್ಣಾ! ಎಲ್ಲವೂ ಆಯಿತೇ? ಭತ್ತದಲ್ಲಿ ತುಸು ಕಲ್ಲು ಹೆಚ್ಚಿದ್ದಂತೆ ತೋರುತ್ತದೆ. ನಾನು ಎಲ್ಲಿ ಹೋದರೂ ನಿನ್ನ ಭತ್ತದ ವಿಷಯ ಬಾಯಿತುಂಬ ಶಿಫಾರಸು ಹೇಳುತ್ತಿದ್ದೆ. ಈ ವರ್ಷ ಏನೋ............

ದೂಮಣ್ಣ:—(ನಡುವೆ ಬಾಯಿ ಹಾಕಿ) ತಡೆಯಿರಿ; ಓ ತಬುರಾ, ಕೇಳಿದಿರಲ್ಲಾ! ಮರ್ಯಾದೆಯೆಂದರೆ ಹೊರುವಷ್ಟಿದೆಯೇ?—ಸಾಕಲ್ಲ ಸಾಹುಕಾರರು ಹೇಳಿದ್ದು.

ಕಿಣಿಯರು:-- ಬೇಸರಿಸಬೇಡ್ರಿ. ನಾನು ಹೀಗೆಯೇ ಇದ್ದುದನ್ನು ಇದ್ದಂತೆ.........

ದೂಮಣ್ಣ:—ಸಾಹುಕಾರರೇ ಹಾಗಲ್ಲ, ನಿಮ್ಮದೇನೂ ತಪ್ಪಿಲ್ಲ. ಕೊಡುವವನು ನಾನಿದ್ದೇನಲ್ಲ; ಮಾತೆಂದರೆ ಪ್ರಾಣ ಬಿಟ್ಟೇನು; ಈ ನಮ್ಮ ಒಕ್ಲಗಳಿಗೇನು ಗೊತ್ತು? ಹೊರಗಿನ ವಹಿವಾಟ ಇದ್ದರಲ್ಲವೇ ರೀತಿ ತಿಳಿಯುವುದು?—ತಬುರಾ ತಿಳಿಯಿತೇ ನಿಮ್ಮ ಸ್ವರೂಪ; ಮರ್ಯಾದೆ ಬಿಟ್ಟವರು. ಒಂದೇ ಒಂದು ಕಲ್ಲಾಗಲೀ, ಧೂಳಾಗಲೀ ಇರದಂತೆ ಭತ್ತ ತಯಾರಿಸಿರಿ. ಒಟ್ಟಾರೆ ನಮ್ಮ ಹೆಸ್ರು ಹಾಳುಮಾಡುವುದು ಬೇಡ. (ಮನೇ ಚಾವಡಿಗೆ ಬಂದು) ಮಗೂ ಶ್ರೀಧರ ಹರಿವಾಣವೆಲ್ಲಿ? ಹೊಗೆಸೊಪ್ಪು ಇಲ್ಲದಿದ್ದರೆ ಕಿಣಿಯರ ಅಂಗ್ಡಿಗೆ ಹೋಗಿ ಕೂಡಲೇ ವಾಪ್ಸು ಓಡಿ ಬಾ—ಒಂದು ಸೇರು ಸಾಕು

ಶ್ರೀಧರ:—(ಹೊರಬಂದು) ಉಪ್ಪು ಬೆಲ್ಲಗಳೂ ಮುಗಿದಿರುವುವಂತೆ; ಅಮ್ಮ ಹೇಳಿದರು. ಮಗುವಿಗೆ ಹಾಕಲು ಸಾಬೂನು ಬೇಕಂತೆ. ನನಗೂ ಸ್ಲೇಟು-ಕಡ್ಡಿಗಳಿಲ್ಲ.

ದೂಮಣ್ಣ:—ಸಾಕು ನಿನ್ನ ಹರಟೆ, ಬೇಕಾದ್ದನ್ನು ತಾ, ಓಡು. (ಧೂಳು ಹಿಡಿದ ಎತ್ತರವಾದ ಮೂರುಕಾಲಿನ ಸ್ಟೂಲನ್ನು ಈಚೆಗೆಳೆದು) ಕಿಣಿಯರೇ ಕೂತುಕೊಳ್ಳಿ; ನಂತ್ರ ನೋಡುವ.

ಕಿಣಿಯರು:—ಒಂದೂ ಬೇಡ; ಆದಷ್ಟು ಬೇಗ ನಮ್ಮನ್ನು ಕಳುಹಿಸು, ಈ ಹೊತ್ತು ನಾಲ್ಕಾರು ಮನೆಗಳನ್ನಾದರೂ ತೀರಿಸಬೇಕಾಗಿದೆ; ಅಂದರೆ ನಂತ್ರದ ಕೆಲಸಕ್ಕೆ ಪುರುಸತ್ತು ಸಿಗುತ್ತದೆ—ಅಲ್ಲದೆ ಹಬ್ಬ ಮುಗಿಯುತ್ತಲೇ, ಸಿಕ್ಕಿದವರಿಗೆಲ್ಲಾ ಭತ್ತವನ್ನು ಕೊಟ್ಟು ಖಾಲಿಮಾಡಿಬಿಡುತ್ತಾರೆ.

(ನಾಲ್ಕು ಕಳಸಿಗೆಯಲ್ಲಿ ಅಳೆಯಲಿಕ್ಕಾರಂಭವಾಯಿತು. ಕಿಣಿಯರು ಕೇಸಿಗೇ ಕೋಲನ್ನು ಹಿಡಕೊಂಡು ಕುಂಬಾರನ ಚಕ್ರ ತಿರುಗಿದಂತೆ ನಾಲ್ಕೂ ಕಳಸಿಗೆಗಳನ್ನು ಕೋಲಿನಿಂದ 'ಗೀಸಿ' ಸರಿಮಾಡುತ್ತಿದ್ದರು. ಅಳೆದರು-ಕಟ್ಟಿದರು-ಹೊತ್ತರು. ಕಡೆಗೆ ಅಂಗಳದಲ್ಲಿ ಉಳಿದುದೆಂದರೆ, ಕೆಲಗೋಣಿಗಳು, ಸಾಹುಕಾರರು, ದೂಮಣ್ಣ, ತಬುರ, ಕಳಸಿಗೆ! ಮನೆಯೊಳಗಿನ ಮುದುಕಿಯ ನಾಲಗೆಯೂ, ಕಿಣಿಯರ ಕೈಯ 'ಗೀಸು'ವ ಕೋಲೂ ತಿರುಗುತ್ತಿದ್ದುದು ನಿಲ್ಲಲೇ ಇಲ್ಲ!]

ಕಿಣಿಯರು: --ಅಣ್ಣಾ ವೀಳ್ಯ ಹಾಕೋಣ.

ದೂಮಣ್ಣ: —(ಮನೆಯೊಳ ಹೋಗಿ) ಶ್ರೀಧರ ಬಂದನೋ?

ಮುದುಕಿ: —(ಹೊಗೆಸೊಪ್ಪಿನ ಕಟ್ಟನ್ನು ದೂಮಣ್ಣನ ಕಾಲಬಳಿಗೆ ಬಿಸಾಡಿ) ಹೀಗೆಯೇ ಮಾಡಿ ಮನೆ ತೆಗಿ. ಇದ್ದ ಎರಡು ಮಕ್ಕಳನ್ನು ನೀರಿಗೆ ದೂಡಿದರೆ ತೀರಿತು. ಮೂರ್ಖ ನಾನು ಹೇಳುವುದು ಈಗ ನಿನಗೆ ಪಥ್ಯ ವಾಗಲಿಕ್ಕಿಲ್ಲ ಹೀಗೆಯೇ ಮಾಡಿದರೆ ಬೇಡಿ ತಿನ್ನಬೇಕಾದೀತು. ನಿನ್ನ ಸುಟ್ಟ ಮರ್ಯಾದೆ! ಸಿಕ್ಕಿದವರಿಗೆ ಕೈಕಾಲಿಗೆ ಬೀಳುವ ನಿನಗೂ ಮಾನದ ಹಂಬಲು!

ದೂಮಣ್ಣ:—(ಪಿಟ್ಟೆನ್ನದೆ ಎರಡು ಹೊಗೆಸೊಪ್ಪುಗಳನ್ನು ಒಮ್ಮೆಯೇ ಹರಿವಾಣಕ್ಕೆಸೆದು) ಈ ಸಲದ ಹೊಗೆಸೊಪ್ಪು ಅಷ್ಟೊಂದು ಒಳ್ಳೇದಿಲ್ಲ. ತೀವ ಕಡಿಮೆಯಾಗಿಯೋ ಏನೋ.

ಕಿಣಿಯರು.--ಎಷ್ಟು ಹೊಗೆಸೊಪ್ಪು ತರಿಸಿದ್ದು?

ದೂಮಣ್ಣ--ಬರೇ ಒಂದು ಸೇರು; ಮತ್ತು ಒಂದು ಪಂಥೇರು ಬೆಲ್ಲ, ಒಂದು ಪೆಟ್ಟಿಗೆ ವ್ಯೆಸಾಬೂನು.

ಕಿಣಿಯರು:—ಹಾಗಾದರೆ ಈ ಬಾಬ್ತು ಏಳು ಕಳಸಿಗೆ ಭತ್ತವನ್ನು ಕೊಡು. ಅಂದರೆ ಜೀನಸಿನ ಬಾಬ್ತಿನ ಒಂದು 'ಐಟಮು' 'ಸೆಟ್ಲ್' ಆದ ಹಾಗಾಗುತ್ತದೆ; ಮಧ್ಯೆ ಮಧ್ಯೆ ಸಿಕ್ಕಿಸಿಡಬಾರದು; ಅದು ಮರ್ಜಿಗೂ ಕಡಿಮೆಯ ರೀತಿ.

ದೂಮಣ್ಣ—ಜೀನಸಲ್ಲದೆ ಬೇರೆಯೂ ನನ್ನಿಂದ ಸಲಲಿಕ್ಕಿದೆಯೋ?

ಕಿಣಿಯರು—(ಪುಸ್ತಕ ಬಿಡಿಸಿ ಸಪ್ಪೆಯಾಗಿ ನಗುತ್ತಾ) ನಾವು ಪುಸ್ತಕದಲ್ಲಿ ಬರೆದಿಡುವುದೂ ಒಂದೇ! ಇದೀಗ ನನ್ನನ್ನು ಪರೀಕ್ಷೆಮಾಡು ವುದು. ಇಂದಿಗೆ ಮೂರು ವರ್ಷ ದಾಟಿತು; ನಿಮ್ಮ ಒಕ್ಲು ಶೀಶಿಗೆ ಸೀಮಂತ ಸಮಯ ತೆಗಿಸಿಕೊಟ್ಟ ಜವುಳಿಯ ಬಾಬ್ತು ಬಾಕಿಯುಳಿದ ಇಪ್ಪತ್ತು ರೂಪಾಯಿಗಳೂ, ಕಳದ ವರ್ಷದ ಮಾರಿಪೂಜೆ ಸಮಯ ಸಂದ ಚಿಲ್ಲರೆ ಸಾಮಾನುಗಳ ಬಾಬ್ತು ಎಂಟು ರೂಪಾಯಿಗಳೂ, ಕೋಣಗಳ ಬಾಬ್ತು ಕೊಂಡುಬಂದ ನಾಲ್ಕು ಮುಡಿ ಹುರುಳಿ, ಹತ್ತು ಸೂಡಿ ಹುರಿ

ಹಗ್ಗ ಇವುಗಳ ಬಾಬ್ತು ಬರಲಿಕ್ಕಿದೆ. ಅದಲ್ಲದೆ ಕಳದ ಸೋಣ ತಿಂಗಳಲ್ಲಿ ಕೈಕಡವಾಗಿ ಕೊಂಡುಹೋದ ಚಿಲ್ಲರೆ ದುಡ್ಡನ್ನೂ ಈ ವರೆಗೂ ಕೊಡಲೇ ಇಲ್ಲ.

ದೂವಣ್ಣ—ಇರಲಿ, ನೀವೇನೂ ಸುಳ್ಳು ಹೇಳುತ್ತೀರೋ? ನಿಮ್ಮ ತಂದೆಯುವರೂ ಅಂಥವರಲ್ಲ. ನಿಮ್ಮ ಮೇಲೆ ನನಗೇನೂ ಅಪನಂಬಿಗೆಯೂ ಇಲ್ಲ. ಪುರಾಣ ಬೇಡ. ಇನ್ನು ಒಟ್ಟಾರೆ ಎಷ್ಟು ಭತ್ತ ಕೊಡಬೇಕು.

ಕಿಣಿಯರು:—ಹೆಚ್ಚುಕಡಿಮೆಯಿದ್ದರೆ ನಂತ್ರ ಲೆಕ್ಕ ಮಾಡಿಕೊಳ್ಳುವ. ಈಗ ಅರ್ಧ ಕೋರ್ಜಿ ಅಕ್ಕಿ ಭತ್ತವನ್ನಳೆಯುವುದು. ಎಲ್ಲಿಯಾದರೂ ಹಳೇ ಬಾಕಿಯಿದ್ದಲ್ಲಿ ನಂತ್ರ ನೋಡುವಾ. ನಮ್ಮನಿಮ್ಮೊಳಗೆಲ್ಲ—ಹೇಗೂ ಆಗುತ್ತದೆ.

ದೂವಣ್ಣ—ನೀವು ಹೇಳಿದಂತೆ ನಮ್ಮ - ನಿಮ್ಮ ಹಿರಿಯರೂ ಅನ್ಯೋನ್ಯ ಪ್ರೀತಿಯಿಂದಿದ್ದರು. ಅಂತೆಯೇ ನಾವೂ........

ಮುದುಕಿ:—ಅಂತೆಯೇ ನೀವೂ ಇರಲಿಕ್ಕೆ ಸಾಧ್ಯವಿಲ್ಲ. ಇದು ಕಲಿ ಕಾಲ ಈಗ ಕಾನೂನಿನಂತೆ ಅಲ್ಲದೆ ನ್ಯಾಯದಂತೆ ಅಲ್ಲ. ನಿನ್ನ ಹಿರಿಯರು ಚೆನ್ನಾಗಿ ದುಡಿದು ಪೇಟೆಯಲ್ಲಿ ಪೈ ಖರ್ಚುಮಾಡದೆ, ಅಂಗ್ಡಿಯವರ ಹರಿವಾಣದ ವೀಳ್ಯ ಜಗಿಯುತ್ತಿದ್ದರು. ಈಗ ನಿನ್ನಂಥಾ ಅರೆಜಾಣರು, ಯಾರೋ ಮಾಡಿಟ್ಟದ್ದನ್ನು ಲೆಕ್ಕಾಚಾರದ ಗೊಡವೆಯಿಲ್ಲದೇ ಮನಬಂದಂತೆ ಕೊಟ್ಟು, ಆವ ಸಾರ್ಥಕತೆಯೂ ಇಲ್ಲದೆ ಎಮ್ಮೆ ತಮ್ಮ ಗಳೆಂದೆನ್ನಿಸಿಕೊಳ್ಳುತ್ತೀರಿ, ಒಂದಕ್ಕೆರಡು ಕೊಡುವುದೂ ನಾವು; ಹಿಂದಿನಿಂದ 'ಹೆಡ್ಡ'ರೆಂದು ತಮಾಷೆಗೀಡಾಗುವುದೂ ನಾವು. ನಮ್ಮಲ್ಲಿ ಮನುಷ್ಯರಲ್ಲಿರಬೇಕಾದ ಸೂಕ್ಷ್ಮವಿಚಾರವೂ, ಬದುಕುವ ಬುದ್ಧಿಯೂ ಇಲ್ಲದ್ದರಿಂದಲೇ ಪಾಪಾಣೆ ಸಾಲಕ್ಕೆ ಪವನಿನಷ್ಟು ತಪ್ಪಿಬಿದ್ದು ಹಾಸ್ಯಕ್ಕೀಡಾಗುತ್ತೇವೆ. ನಮ್ಮ ಹಿರಿಯರಂತೆ ನಾವಿರಲು ಇದು ಹದಿನೈದನೇ ಶತಮಾನವಲ್ಲ; ಮನೇ ಮಾಡಿನ ಮೇಲೆ ವಿಮಾನಗಳು ಹದ್ದುಗಳಂತೆ ಹಾರುವ ಈ ಕಾಲದಲ್ಲಿ, ದೂಪಾ—ನಿನ್ನ ಗಲ್ಲವಿಾಸೆಗಾಗಲೀ, ಪುರಾತನದ ಮಾಡಿಗಾಗಲೀ, 'ಜೀಗಿ'ನ ಕಾಲಮೆಟ್ಟಿಗಾಗಲೀ, ಯಾರೂ ಮಾನ

ಕೊಡಲಿಕ್ಕಿಲ್ಲ, ಮೂಢಾ! ಹಿರಿಯರಂತೆ ಎನ್ನುವ ನೀನು ನಿನ್ನ ಆಯುಷ್ಯ ದಲ್ಲಿ ಒಂದು ಗದ್ದೆಯನ್ನಾಗಲೀ, ಒಂದೆಕ್ರೆ ಗುಡ್ಡೆ ಕೃಷಿಯನ್ನಾಗಲೀ ಮಾಡಿರುವೆಯಾ? ಗಂಟು ಮುಳುಗಿಸಿ, ಕದ್ದು ಜೈಲುಸೇರಿ, ಶಿವಾಜಿ-ಗಾಂಧಿಯರಿಗೆ ಸರಿಮನೆ ಆಗಲಿಲ್ಲವೇ ಎಂದು ತರ್ಕಿಸುವಂಥಾ ತ್ರಿಳಿಗೇಡಿಗಳಂತೆ ಬೊಗಳಬೇಡ.

ಕಿಣಿಯರು:—(ಅಡಿಗೆ ನೋಡಿ ವೀಳ್ಯ ಜಗಿಯುತ್ತಾ) ನಾನೀಗ ಹೋಗುತ್ತೇನೆ. ನಾಡದು ಧನಲಕ್ಷ್ಮೀ ಪೂಜೆಗೆ ಬಾರದಿರಬೇಡ. ಎಲ್ಲ ವನ್ನೂ ಅಲ್ಲ ಮಾತನಾಡುವಾ. ನನಗೆ ಇನ್ನೂ ನಾಲ್ಕು ಮನೆಗಳು ಉಳಿದಿವೆ.

ದೂಮಣ್ಣ:—(ಹತ್ತಿರ ಹೋಗಿ ಮಿಾಸೆ ತಿರುವುತ್ತಾ) ಕಳದ ವರ್ಷ ಮಳೆಗಾಲದಲ್ಲಿ ತಂದ ಅಕ್ಕೀ ಹೊಲಿ ಸೇರಿಸಿ, ಲೆಕ್ಕ ಮಾಡಿ, ಹಿಂದೆ ಮಾಡಿದ ಎರಡು 'ಡಿಮಾಂಡ್‌ನೋಟು'ಗಳನ್ನೂ, ಒಟ್ಟು ಮಾಡಿ ಎಲ್ಲ ದಕ್ಕೂ ಪ್ರತ್ಯೇಕ ನೋಟು ಮಾಡುವಾ. ಬರೆಯುವರೆ ಜೋಗಪ್ಪ ಮಾಸ್ತರರನ್ನೂ ಕರಕೊಂಡು ಬರುತ್ತೇನೆ.

ಕಿಣಿಯರು:—ಆಗಬಹುದು. ನೀನು ಹೇಳಿದಂತೆ. ಮೊನ್ನೆ ಫಿರ್ಯಾದೆಯ ಬಗ್ಗೆ ತೆಗೆದುಕೊಂಡ ನೂರೈವತ್ತು ರೂಪಾಯಿಗಳನ್ನು ಮಾತ್ರ ಮಂಡಪೂಜೆಯ ಮರ್ಯಾದೆಗಾಗಿ ತಾರದೆ ಕೂತುಕೊಳ್ಳಬಾರದು. ನೆನಪಿರಬೇಕು. ನಂತರ ನಾವೆಲ್ಲ ಇರುವವರೇ ಅಲ್ಲ!

ದೂಮಣ್ಣ:—ನೋಡುವ, ಅಷ್ಟೇ ಅಲ್ಲ! ಏನಾದರೂ ಮಾಡುತ್ತೇನೆ. ಈಗಿನ ಬಾಕಿ ಅರ್ಧ ಕೋರ್ಜಿ ಅಕ್ಕಿಯ ಭತ್ತವನ್ನು ಮಧ್ಯಾಹ್ನದ ಮೇಲೆ ನಮ್ಮ ಒಕ್ಲು ಬೈಲುಮನೆಯವರಿಂದ ಕೊಂಡುಹೋಗಬಹುದು.

ಕಿಣಿಯರು:—ಆಗಬಹುದು. ನಾನು ಈ ವರೆಗೂ ನಿನ್ನ ಮಾತನ್ನಲ್ಲಗಳೆದುದಿದೆಯೇ? ದೇವರಿದ್ದಾನೆ. ನಾನೀಗ ಹೋಗುತ್ತೇನೆ. (ಒಂದು ಗದ್ದೆ ದಾಟಿ ಹೋಗಿ) ಏ ಅಣ್ಣಾ! ಒಂದು ಸಂಗ್ತಿ ಮರೆತುಬಿಟ್ಟೆ.

ದೂಮಣ್ಣ:—(ಗಡಿಬಿಡಿಯಲ್ಲಿ ಹೋಗುತ್ತಾ ಹತ್ತು ರೂಪಾಯಿ ಬೆಲೆ ಬಾಳುವ ಪುಡಿಬುರುಡೆಯನ್ನು ಕೆಳಹಾಕಿ ಒಡೆದು) ಚಿಂತೆಯಿಲ್ಲ—ಹೋಗಲಿ, ಏನದು?

ಕಿಣಿಯರು—(ಕಿವಿಯಲ್ಲಿ) ನಮ್ಮ ಹಳೇ ಎರಡು ನೋಟುಗಳಿಂದ ನನಗೆ ಸುಮಾರು ಒಂದೂವರೆ ಸಾವಿರ ನಷ್ಟವಾಗುತ್ತದೆ—ಆ ಸುಟ್ಟ ಕೋಂಗ್ರೆಸ್ ಮಸೂದೆಯಿಂದ! ಆ ಬಗ್ಗೆ ರಿಯಾಯತಿಯಿಡಬೇಕು. ಎಲ್ಲಾ ಬಾಕಿಗಳನ್ನೂ ಒಟ್ಟುಮಾಡಿ, ನಿನ್ನ ತಾಯಿತಂಗಿಯರನ್ನೂ ಸೇರಿಸಿ ರಿಜಿಸ್ಟ್ರನಿಶಿ ನೋಟು ಮಾಡುವ. ನಿನ್ನ ಭಾರವೂ ಕಡಿಮೆಯಾದಂತಾಗುತ್ತದೆ. ತಿಳಿಯಿತಲ್ಲ!

ದೂಮಣ್ಣ—ಆಗಬಹುದು. ನಿಮ್ಮ ಗಂಟಿನ ಒಂದು ಪೈಗೂ ಮೋಸವಾಗಬಾರದು. ನನ್ನ ಮುದಿ ತಾಯಿ ಸ್ವಲ್ಪ "ಪಿರಿ ಪಿರಿ"ಮಾಡಿಯಾಳು. ಆದರೆ ಅದಕ್ಕೆಲ್ಲ ಉಪಾಯಮಾಡುವಾ. ಹೇಗೂ ಮರ್ಯಾದೆಯುಳಿದರೆ ಸಾಕು. ಆಕೆಗೆ ಬೇಕಾದಷ್ಟು ಹೇಳುತ್ತೇನೆ. ಅವಳ ಮನಸ್ಸಮಾಧಾನದ ಬಗ್ಗೆ "ಒಂದು ಬಾಟ್ಲಿ" ತಂದುಕೊಟ್ಟರೆ, ಸರಿಬರುತ್ತದೆ.— ನೋಡೀ ಪ್ರಾಯದ ಹೆಂಗ್ಸು—ವಿಚಾರವಿಲ್ಲದೆ ಹೇಳುತ್ತಾಳೆ. ನೀವೇನೂ ಬೇಸರಿಸಬೇಡಿರಿ.

ಕಿಣಿಯರು—ಇಲ್ಲಪ್ಪಾ! ನನ್ನ ತಾಯಿಯು ಹಾಗೆ! (ಪುನಃ ಮುಂದೆ ಹೋಗಿ, ಪುನಃ ತಡೆದು) ಮುಂಡಪೂಜೆಗೆ ರೂಪಾಯಿ ತೊಂದ್ರೆಯಾದೀತು!

ದೂಮಣ್ಣ—ಆಗಲಿಕ್ಕಿಲ್ಲ. ಒಂದುವೇಳೆ ಸಾಧ್ಯವಾಗದಿದ್ದರೆ, ಅಡವಿನಲ್ಲಿರುವ ಭಂಗಾರದ ಪಟ್ಟೆಯನ್ನು ಮಾರಿಯಾದರೂ ತೀರಿಸುತ್ತೇನೆ. ಅದರಲ್ಲೇನ ? ಊಟಕ್ಕಾಗದ ಉಪ್ಪಿನಕಾಯಿಯೇಕೆ?

ಕಿಣಿಯರು—ಸರಿ ನನ್ನ ಮಗಳ ಮದುವೆಯೂ ಆಗಲಿದೆ ಹೇಗೂ ಪವನು ತೆಗೆದುಕೊಳ್ಳದೆ ನನಗೆ ನಿರ್ವಾಹವೇ ಇಲ್ಲ. ನೋಡುವಾ—ಏನೆಲ್ಲ ಆಗುತ್ತದೆಂದು. ನಾನೀಗ ಹೋಗುತ್ತೇನೆ. ಹತ್ತು ಘಂಟೆಯಾಗಲಿಕ್ಕಾಯಿತು. (ಹೊರಟು ಹೋಗುವರು.)

ದೂಮಣ್ಣ—(ಮನೆಗೆ ಬಂದು) ತಬುರಾ, ಕಿಣಿಯರದ್ದು ಹೇಗೂ ಇತ್ಯರ್ಥವಾದಂತೆಯೇ! ಪೇಟೆಯ ಸಾಹುಕಾರರಿಬ್ಬರದ್ದು ಜವುಳೀ ಬಾಬ್ತು ಬಾಕಿಯಿದೆ. ಒಬ್ಬರ ಮಟ್ಟಿಗೆ ನಮ್ಮ ದೊಡ್ಡ ಜೊತೆ ಕೋಣಗಳನ್ನು ಮಾರಿ, ನೂರುರೂಪಾಯಿ ತುಂಬಿಸಬಹುದು. ಅವಕ್ಕೂ ಗಿರಾಕಿ

ಬರುತ್ತಿದೆ. ಇನ್ನೊಬ್ಬರ ಲೆಕ್ಕಾಚಾರವನ್ನು ಹೇಗೂ ತೀರಿಸಬೇಕಾಯಿತಲ್ಲಾ. (ಸ್ವಲ್ಪ ಹೊತ್ತು ಗಂಭೀರತೆ ವಹಿಸಿ) ಮಾಡುವಾ! ಒಂದು ತಿಂಗಳ ಪುರುಸತ್ತು ತೆಗೆದುಕೊಂಡು ನಮ್ಮ ದೊಡ್ಡ ಕಾಡನ್ನು ಕಟ್ಟಿಗೆ ಕಡಿಯಲು ಆರಿಗಾದರೂ ಮಾರಿಬಿಟ್ಟರಾಯಿತು. ಅಂತೂ ಮರ್ಯಾದೆ ಹೋಗಲು ದೇವರು ಬಿಡುವುದಿಲ್ಲ.

x x x x x

(ತುಳಸೀಕಟ್ಟೆಗೆ ಸುತ್ತು ಬರುತ್ತಿದ್ದ ದೂಮಣ್ಣನ ಬಳಿಗೆ ತಬುರನು ಬರುವನು. ದೂಮಣ್ಣನು ಮೌನವನ್ನು ಬಿಡದೆ ತಲೆಯಲ್ಲೇ ಏನೆಂದು ಕೇಳುವನು.)

ತಬುರ—ಬೆಳಿಕಟಾಯಿಸಿದ ಭತ್ತಕ್ಕೆ ಕೂಲಿಹೆಂಗಸರೆಲ್ಲಾ ಬಂದು ಕಾಯುತ್ತಿರುವರು. ಇಪ್ಪತ್ತೈದು ಮಂದಿಯಿದ್ದಾರೆ.

(ಮುಖ ಕಪ್ಪುಮಾಡಿಕೊಂಡು ಒಳಹೋಗಿ ವಿಭೂತಿಹಚ್ಚಿಕೊಂಡ ಯಜಮಾನ ದೂಮಣ್ಣನು) --

ದೂಮಣ್ಣ—ಭತ್ತವು ಓಡಿಹೋಗುತ್ತದೆಂದೋ! ಮರ್ಯಾದೆಯಿಲ್ಲದವುಗಳು! ನಾಲ್ಕು ದಿವ್ಸ ಹೋಗಲಿ ನೋಡುವಾ. ಒಕ್ಕಲುಗಳ ಭತ್ತವು ವಸೂಲಾಗಲಿ-ತಬುರಾ, ಹೋಗಿ ಹೇಳು. ಅವರೆಲ್ಲ ಬರುವ ಆದಿತ್ಯವಾರ ಬರಲಿ. ಅವರಿಗೇನು ಜೀವ ಎಳೆಯುತ್ತದೋ? ಎಲ್ಲಿಯಾದರೂ ಮಾ-ರಿ-ಗಳು! (ಕೊಡಪಾಣದಂಥಾ ತಂಬಿಗೆಯಲ್ಲಿ ನೀರು ಹಿಡಕೊಂಡು ಊಟಕ್ಕೆ ಹೋಗುತ್ತಾ) ಇಲ್ಲಿ ಒಂದು ಹಿಡಿಭತ್ತ ಇಲ್ಲ. ಮನೆ ಊಟದ ಬಗ್ಗೂ ಬೇರೆಕಡೆಯಿಂದ ಬದ್ಲಿಗೆ ತರಬೇಕಾಗಿದೆ. ಇವರಿಗೆ ತಮಾಷೆ! ಕೋಣನ ನೋವು ಕಾಗೆಗೆ ತಿಳಿಯಲಿಕ್ಕಿಲ್ಲ!

ಮುದುಕಿ—ನಿಜವಾಗಿಯೂ ಬಾಯಿಬರುವ ಕೋಣನೇ ಹೌದು!

[ಮುಖ ಅಡಿಗಿಟ್ಟು, ದೂಮನು ಗಂಜಿಯೂಟಕ್ಕೆ ಕುಳಿತನು.]

**N. B.** ಕೇವಲ ಕಲ್ಪಿತ ಕಥೆಯಾದರೂ, ಸನ್ನಿವೇಶಗಳೆಲ್ಲಾ ಮನೆ-ಮನೆ ನಡೆಯುವಂಥವುಗಳಾಗಿವೆ —

**M. S. H.**

# ಹಳ್ಳಿಯ ಸಾಮ್ರಾಜ್ಯದಲ್ಲಿ . . . . .

(ಹಳ್ಳಿಗನಿಂದ)

ಈ ಕಾಲದಲ್ಲಿ ಹಳ್ಳಿಗಳ ವಿಷಯವಾದ ಮಾತುಕತೆಗಳೇ ಜಾಸ್ತಿ. ಕೆಲವರ್ಷಗಳ ಹಿಂದೆ ಸೋಡ್ತಿ ಕುರಿಘಂಡುಗಳಿಂದ ಹಣ ಸಂಗ್ರಹಿಸಿದಂತೆಯೇ- ಈ ಕಾಲದಲ್ಲಿ ಗ್ರಾಮಾಭ್ಯುದಯ ಎಂಬುದನ್ನು ಮಾತು ಮಾತಿಗೆ ಎತ್ತಿ ಅಭಿಪ್ರಾಯಸಂಗ್ರಹವಾಗುತ್ತಿದೆ. ಕಾರಣವೇನೆಂದರೆ ದೇಶದ- ಹಿಂದೂದೇಶದ ಉನ್ನತಿಯು ಹಳ್ಳಿಗಳ ಏಳ್ಗೆಯೊಂದಿಗೇ ಸಾಧ್ಯವಲ್ಲದೆ ಬೇರೆ ಹಾದಿಯಿಲ್ಲವೆನ್ನುವಷ್ಟು, ಈ ಯಂತ್ರಯುಗದಲ್ಲೂ, ಪ್ರತಿನಿಧಿ ಸಂಘಗಳೂ, ಸರಕಾರವೂ ತಿಳಿದುಕೊಂಡಾಗಿದೆ.—

## ಹಳ್ಳಿಯೊಡಲಲ್ಲಿ!

ಎಲ್ಲರೂ ತಿಳಿದಿರುವಂತೆ ಬರೇ ಪ್ರಚಾರ-ಭಾಷಣಗಳಿಂದ ಗ್ರಾಮದ ಹಿತವು ಸಾಧ್ಯವಾಗದು. ಪೇಟೆಯ ಗೌಜಿಯೆಲ್ಲ ಹಳ್ಳಿಗಳಿಗೆ ಗುಡಿಗಿನಂತೆ ಶಬ್ದಮಾಡೀತು; ಕನ್ನಡಿಯೊಳಗಣ ಗಂಟಿನಂತೆ ಎದೆ ಆರಿಸೀತು. ಬರೇ ಅಷ್ಟರಿಂದಲೇ ಇಷ್ಟಸಿದ್ಧಿಯಾಗದು. ಹಳ್ಳಿಯೊಳಹೊಕ್ಕು ಇದ್ದು ನೋಡಿದರೆ, ಅಲ್ಲಿಯ ಗುಣದೋಷಗಳನ್ನು ಹೆಕ್ಕಿ ಹೇಳಬಹುದಾಗಿದೆ. ನೋಡುತ್ತಿದ್ದಂತೆಯೇ ಗುಣಗಳನ್ನು ಹೆಚ್ಚಿಸುವ, ದೋಷಗಳನ್ನು ನಿವಾರಿಸುವ ಉಪಾಯಗಳು ಸ್ವಾಭಾವಿಕವಾಗಿ ಪ್ರತಿಯೋರ್ವ ಹಳ್ಳಿಗನಿಗೂ ಹೊಳೆಯುತ್ತದೆ. ಅವಕ್ಕೆ ಭಂಡವಾಳ ಬೇಡ.—ಸೈನ್ಯ ಸರಂಜಾಮು ಬೇಡ. ಲಿಮಿಟೆಡ್ ಕಂಪೆನಿಗಳು ಬೇಡ. ಯುವಕವೃಂದದ ಮನಸ್ಸೊಡಂಬಟ್ಟರೆ ತೀರಿತು.

## ಕುರುಡು ವಿಶ್ವಾಸ

ಹಳ್ಳಿಯಲ್ಲಿ ಕೈಬಾಯಿಗಳಿಲ್ಲದ, ಚೇತನವಿಲ್ಲದ, ಪೊದೆ ಪೊದರುಗಳ ಗುಂಪಿನೊಳಗೆ, ಮರದ ಬೇರುಗಳೆಡೆಯಲ್ಲಿ—ಚೌಕ ಕಲ್ಲುಗಳೂ, ಹಳೇ ಮಂಚಗಳೂ—ದೈವದೇವರ ಪ್ರತಿನಿಧಿಗಳೆಂದು, ಪ್ರತಿ ಮನೆಯಿಂದ

ವರ್ಷಕ್ಕೆ ಎರಡು ಮೂರು ಬಾರಿ ನಾಲ್ಕಾರು ಕೋಳಿ ಕುರಿಗಳ ಆಹುತಿಯು ಔತಣವನ್ನು ಪಡಕೊಳ್ಳುತ್ತಿವೆ. ಹೊಟ್ಟೆಬಟ್ಟೆಗಿಲ್ಲವಾದರೂ ಹಳ್ಳಿಗನು ಪ್ರೇತ ಭೂತಗಳ ಸೇವನದಿಂದ ತನಗೆ ಅಗತ್ಯವಿಲ್ಲದ, ಆರಿಗೂ ಉಪಕಾರ ವಾಗದ ರೀತಿಯಲ್ಲಿ ಸಾಲಮಾಡಿಯಾದರೂ ಖರ್ಚುಮಾಡಿ ಅವಸ್ಥೆಗೀಡಾಗುತ್ತಿದ್ದಾನೆ. ಈ ಕಾಲದಲ್ಲಿ ಮೋಟರ್‌ಗಳ-ಜಾತ್ರೆಗಳ-ಪೇಟೆ ಪಟ್ಟಣಗಳ ಬದಿಗಳಲ್ಲಿ ಅಂಗಹೀನರಾಗಿ ಪೈ ಪಾವಾಣೆ ಬೇಡುವ ಕುರುಡರ ಕುಂಟರ ಪಂಗಡವನ್ನೇ ಹೋಲುವ-ಪರೋಪಜೀವಿಗಳು ಹಳ್ಳಿಗರ ನೆತ್ತರನ್ನು ಜಿಗಣೆಯಂತೆ ಹೀರುತ್ತಿವೆ; ಬಲಿ ಬೈದ, ಬಲಿಮೆ ಭವಿಷ್ಯ, ಗಂಧಪ್ರಸಾದ, ಜಾತಕ ಸೂತಕ ಇತ್ಯಾದಿಗಳಿಂದ ಹಳ್ಳಿಯ ಸತ್ವವನ್ನು ಪೈಮಾಡುವ ಪೂಜಾರಿಗಳ ಉಪಟಳವು ವರ್ಣನಾತೀತವಾದುದು. ಅಲ್ಲದೆ ಹಳ್ಳಿಯಲ್ಲಿ ಅನಾವಶ್ಯಕವಾಗಿ 'ಉಪಾಯವಿಲ್ಲ-ಮರ್ಯಾದೆಗಾಗಿ' ಎಂಬ ಮಂತ್ರದೊಡನೆ ಹಳ್ಳಿಗನು ಹಾಳುಮಾಡುವ ಹಣವೂ ಶ್ರಮವೂ ಎತ್ತಿ ತೋರಿಸುವಂಥಾದ್ದು. ಮದುವೆಮಾಡುವುದು, ಮನೆಕಟ್ಟುವುದು, ಬಯಕೆಹಾಕುವುದು, ಹೊರೆಕಟ್ಟುವುದು, ದೈವದಗುಡಿ ದುರಸ್ತಿ, ಹರಕೆ ಹೊರುವುದು ಇತ್ಯಾದಿಗಳು ಒಂದಿಳಿಯಾದರೂ ಈ ಕಾಲದಲ್ಲೂ ಕಡಿಮೆಯಾಗಲಿಲ್ಲ. ಗೇಯುವ, ಕೂಗುವ, ತಿನ್ನುವ ಸಂಸಾರಿಕ ಹಳ್ಳಿಗನಿಗೆ ಬೈರಾಸಿಲ್ಲ; ಅವನ ತಾಯಿ-ಹೆಂಡ್ತಿಯರಿಗೆ ಕಪ್ಪು ಬಟ್ಟೆ ತುಂಡಿಲ್ಲ; ತನ್ನ ಮನೆಗೆ ಹುಲ್ಲಿನ ಛಾವಣಿಯಾದರೂ ಆಗಿಲ್ಲ! ಆದರೂ ಭೂತದ ಗುಡಿಗೆ ತಾಮ್ರ ಮುಚ್ಚಿಸಲೇಬೇಕು; ಬೆಳ್ಳಿಯಂಚಿನ ಘೋತರವು ಪಾತ್ರಿಗಾಗ ಬೇಕು; ಸಾಲಮಾಡಿಯಾದರೂ ಸಾವಿರಾರು ರೂಪಾಯಿ ಬ್ರಹ್ಮಕಲಶವಾಗಬೇಕು; ಮದುವೆಯಲ್ಲಿ ಕಡಿಮೆಯಲ್ಲೂ ಒಂದು ಕೋರ್ಜಿ ಅಕ್ಕಿಯಾದರೂ ಬೇಯಿಸಲ್ಪಡಬೇಕು; (ಅದು ಹೇಗೆ ಬರಿದಾದರೂ ಚಿಂತೆಯಿಲ್ಲ.) ನೂರಾರು ರೂಪಾಯಿಗಳು ಬರೀ ಸಿಡಿಮದ್ದಿಗೆ ಖರ್ಚಾಗಿ, ಒಂದು ವಾರದ ಮದುವೆಯಾಗಬೇಕು. ಅಲ್ಲಿಗೆ ಎಂಟನೇ ದಿವಸವೇ ಜೀವವಿದ್ದಂತೆಯೇ ಸಮಾಧಿಯಾಯಿತೆಂದೂಹಿಸಬೇಕು.—ಕಾಯಿಲೆಯಾಯಿತೆಂದರೆ, ನೆರೆಕರೆಯ ಹತ್ತಿಪ್ಪತ್ತು ಹೆಂಗಸು ಮಕ್ಕಳೆಲ್ಲ ಹಾಸಿಗೆ ಬಳಿ ಗುಂಪಾಗಿ ಕೂಡಿ, ಒಳ್ಳೇ

ಗಾಳಿ ಬೀಸಲೂ ಬಿಡದೆ, ಸರಿಯಾದ ಕ್ರಮದಲ್ಲಿ ಔಷಧಿಮಾಡಲೂ ಬಿಡದೆ, ಸತ್ತುಹೋದವರ ಅಂದಚಂದಗಳನ್ನು ವಿವರಿಸುತ್ತಾ ಆ ಹೇತು, ಈ ಸೋಂಕು ಎಂದು ಹರಟುತ್ತಾ—ಆ ಕಾಯಿಲೆಯು ಅಂಟುರೋಗವಾದರೆ ತಾವೂ ಅದರ ಪಾಲು ತಕ್ಕೊಂಡು ಇಡೀ ಗ್ರಾಮದಲ್ಲಿ ಹಬ್ಬಿಸುವರು; ಒಂದಿಷ್ಟು ವಿಚಾರವಿಲ್ಲದೆ ಮುಂದರಿಸುವರು.

## ಒಣ ಡಂಭ!

ಸರಳತನದ, ಸಾದಾ ಜೀವನದ ಹಳ್ಳಿಗರಲ್ಲಿ ಒಣ ಡಂಭವೂ, ನಿರ್ಲಜ್ಜ ದಾಕ್ಷಿಣ್ಯವೂ ಮನೆಮಾಡಿಕೊಂಡಿವೆ. ಆರಾದರೂ ತಮ್ಮ ಕಾರ್ಯಸಾಧನೆಗಾಗಿ ಕುಸು ಹೊಗಳಿಬಿಟ್ಟರೆಂದರೆ ಗಾಳಿಯೂದಿದ ಚೆಂಡಿನಂತೆ ಹಳ್ಳಿಗನು ತಾನು ರಾತ್ರಿ ಹಗಲು ದುಡಿದು ಇಟ್ಟ ಕಾಯಿಪಲ್ಯವನ್ನೋ, ದವಸ ಧಾನ್ಯವನ್ನೋ ಮರಮಟ್ಟುಗಳನ್ನೋ ಪುಕ್ಕಟೆಯಾಗಿ ಕೊಟ್ಟುಬಿಡುತ್ತಾನೆ. ನಂತರ ತನಗೆ ಬೇಕಾದಾಗ ಹೊಲಿಕೊಟ್ಟು—ಬಡ್ಡಿ ತೆತ್ತು,—ಕೈಕಾಲು ಹಿಡಿದು ತರುತ್ತಾನೆ. ತನ್ನ ಪೈಯ ಕೆಲಸಕ್ಕೋಸುಗ ರೂಪಾಯಿ ವ್ಯಯಿಸುತ್ತಾನೆ. ಅಲ್ಲದೆ ರೈತರು ಮಾಮೂಲಾಗಿ ವರ್ಷಕ್ಕೆ ನಾಲ್ಕಾರು ಬಾರಿ ಕಪ್ಪಕಾಣಿಕೆ (ಉಳ್ಳಿ)ಗಳನ್ನು ತೆರುತ್ತಾ ಬರುವುದು, ಚಿಲ್ಲರೆ ಆಫೀಸರರುಗಳಿಗೂ, ಸಾಹುಕಾರರಿಗೂ, ಉದ್ಯೋಗಸ್ಥರಿಗೂ, ಕಾರಭಾರಸ್ಥರಾದ ಹಳ್ಳೀ ಮುಂದಾಳುಗಳಿಗೂ ತಿಳಿದ ಸಂಗತಿ. ತಾವು ಗೇದುದು ಸಾಕಾಗದಿದ್ದರೆ ಹಳ್ಳಿಗರು ಕ್ರಯಕೊಟ್ಟಾದರೂ ತಂದುಕೊಟ್ಟೇ ಕೊಡಬೇಕಾಗಿ ಬಂದಿದೆ. ಚಿಂದಿಬಟ್ಟೆಯ, ಒರಟು ತಲೆಕಾಲುಗಳ ಹಳ್ಳಿಗನನ್ನು ಕಂಡೊಡನೆ, "ನಮ್ಮಲ್ಲಿಗೆ ಬರುವಾಗ ಏನು ತರುತ್ತೀ—ನಾವು ಬಂದರೆ ಏನು ಕೊಡುತ್ತಿ"!! ಎಂಬ ಭಾವನೆ ಹುಟ್ಟುತ್ತದೆ.

ತಾನು ಒಳ್ಳೆಯವನೆಂದು ಕೇಳಬೇಕೆಂದೇ ಎಣಿಸುವ ಹಳ್ಳಿಗನು ತನ್ನ ಮನೆದುಲ್ಲೂ ಹದವಿಾರಿ—ರೀತಿತಪ್ಪಿ, ತನ್ನ ಸ್ಥಿತಿಗತಿಗಿಂತಲೂ ದ್ವಿಗುಣಿತವಾಗಿ ವೆಚ್ಚಮಾಡುತ್ತಾನೆ. ಅಗತ್ಯವಿಲ್ಲದ ಖರ್ಚುಗಳೆಲ್ಲ ಜುಗಾರಾಡಿ ಕಳೆಯುವ ಹಣದಂತೆ ಎಂಬುದನ್ನವನು ತಿಳಿಯನು. ತನ್ನಲ್ಲಿಲ್ಲದಿದ್ದರೂ, ಸಾಧ್ಯವಾಗದಿದ್ದರೂ, ಯಾರಾದರೂ ಏನಾದರೂ ಕೇಳುತ್ತಲೇ ಒಪ್ಪಿಬಿಡುವ

ಸ್ವಭಾವವು ಹಳ್ಳಿಗನದು. ಅನಂತರ ತನ್ನ ಕೆಲಸಗಳನ್ನು ಹಾಳುಮಾಡಿಕೊಂಡು, ತಾನು ಯಾರು ಏನುಮಾಡುತ್ತೇನೆಂಬ ಜವಾಬ್ದಾರೀ ಹಂಬಲನ್ನು ಬಿಟ್ಟು ಕೆಡುತ್ತಾನೆ. ಇತರರ ಕಾಲನ್ನು ಉಳಿಸುವುದಕ್ಕಾಗಿ ತನ್ನ ಗುತ್ತಿಗೆಯನ್ನು ಕೊಡುವುದರಲ್ಲಿ ಅರ್ಥವಿಲ್ಲ. ಯಶಸ್ಸಿಲ್ಲ. ಇಷ್ಟಲ್ಲದೆ ಹಳ್ಳಿಗನು ತನ್ನ ಆಯುಷ್ಯದ ಪೈ ಪಾವಾಣೆ ಕೂಡಿಕೆ ಹಣವನ್ನೂ, ತನ್ನ ಕಷ್ಟದ ಸದಭಿಪ್ರಾಯದ ಋಣವನ್ನೂ ಚಿಲ್ಲರೆ ವಿಷಯಗಳಿಗಾಗಿ ಹಾಳು ಮಾಡಿಕೊಳುತ್ತಾನೆ. ನೀರಿನ ನೆವನದಿಂದಾಗಲೀ, ಮರದ ಗೆಲ್ಲಿನ ಕಾರಣದಿಂದಾಗಲೀ, ಎತ್ತೆಮ್ಮೆಗಳು ಪೈರು ತಿಂದುವೆಂದಾಗಲೀ, ಚಿಲ್ಲರೆ ಸಂಗತಿಗಳಿಗಾಗಿ—ಸಿಕ್ಕಿದವರ ಮಾತುಕೇಳಿ ಕೋರ್ಟು ಕಛೇರಿಗೆ ಹೋಗಿ ಮುಕ್ಕಾಲು ಮೂರು ಘಳಿಗೆಯೊಳಗೆ ಊರಿಲ್ಲದ ಭಿಕನಾಶಿಯಾಗಿಬಿಡುತ್ತಾನೆ. ಎಲ್ಲರೂ ಹೇಳಿಕೊಟ್ಟುದೂ ವಕೀಲರು ಕುಣಿದುದೂ ತನ್ನ ಕಷ್ಟವನ್ನು ನೋಡಿಯಲ್ಲ; ತನಗಾಗಿಯಲ್ಲ; ತನ್ನ ಪಾವಾಣೆಗಾಗಿ ಎಂದು ತಿಳಿಯುತ್ತದೆ. ತಾನು 'ಖಾಲಿ ದಾಮು'ನೆಂದೂ, ಅನುಕೂಲತೆಯಿದ್ದರೆ ಮಾತ್ರ 'ದೊಡ್ಡಣ್ಣ'ನಾಗುತ್ತೇನೆಂದೂ ಪ್ರತ್ಯಕ್ಷ ಅನುಭವವಾಗುತ್ತದೆ– ಹಳ್ಳಿಗರು ಬಿಸಿಲ್ಗುದುರೆಯ ಸವಾರರಂತೆ ತಮ್ಮ ಮಕ್ಕಳನ್ನು ಪಟ್ಟಣದ ವಿದ್ಯಾಭ್ಯಾಸಕ್ಕೆಂದು—ಕಳುಹಿಸಿಕೊಟ್ಟು, ಅವರು ಹೇಳಿದ ಬರೆದ ಮೇರೆಗೆ ಅಕ್ಕಿ ಭತ್ತ ಮಾರಿದ ಹಣವನ್ನು ಕಳುಹಿಸಿಕೊಡುತ್ತಾ ಬರುತ್ತಾರೆ. ತಮ್ಮ ಮಕ್ಕಳು ಏನೋ ಒಂದು ಉದ್ಯೋಗ (ನೌಕರಿ) ದಲ್ಲಿ ಬಿದ್ದು ತಮಗೆ ಕೊಡುವ ಭಾವೀ ಸುಖದ ಹಂಬಲನ್ನು ಅವರು ಎಣಿಸುತ್ತಿರುತ್ತಾರೆ. ಅದು ಬರೇ ಕನಸು ಎಂಬುದು ಅವರಿಗೆ ತಿಳಿಯದು.—

## ಹಳ್ಳಿಗಳು ಚೇತನಗೊಳ್ಳಬೇಕು.

ಹಳ್ಳಿಗರಲ್ಲಿ ವಿಚಾರಕ್ರಾಂತಿಯು ಉತ್ಪನ್ನವಾಗಬೇಕು. ಅದು ಸುಶಿಕ್ಷಿತ, ಸುರಿತಯುವಕರಿಂದ ಕಾರ್ಯರೂಪವಾಗಿ ಕಂಗೊಳಿಸಬೇಕು.

ಹಳ್ಳಿಗರು ಕೃಷಿ–ಕೈಗಾರಿಕೆಗಳಲ್ಲಿ ಸುಧಾರಣೆ ಹೊಂದಬೇಕಾದುದಕ್ಕಿಂತಲೂ ಹೆಚ್ಚಾಗಿ, ತಾವು ಅನಗತ್ಯವಾಗಿ ಕಣ್ಮುಚ್ಚಿ ಖರ್ಚು ಮಾಡುವುದನ್ನು ಒಂದೇ ಬಾರಿಗೆ ನಿಲ್ಲಿಸಬೇಕು. ಆಗ ಇಕ್ಕಡೆಯಲ್ಲೂ

ಗುಣಸಿಕ್ಕಿ, ಅರೆಜೀವದಿಂದಲಾದರೂ ಹಳ್ಳಿಯಲ್ಲಿ ಬದುಕಬಹುದಾಗಿದೆ. ಹಳ್ಳಿಯ ಐದುರೂಪಾಯಿ ಉಳಿತಾಯವು ಪೇಟೆಯ ಐವತ್ತು ರೂಪಾಯಿಗಿಂತ ಮಹತ್ವದ್ದೆಂಬುದು ಸರ್ವಸಾಮಾನ್ಯ ಎಲ್ಲರಿಗೂ ತಿಳಿದಿರುವ ಸಂಗತಿ; ಅಂದಬಳಿಕ ಹಳ್ಳಿಯ ಒಬ್ಬ ಕೂಲಿಯು ಕಡಿಮೆಯಲ್ಲೂ ತಿಂಗಳೊಂದರ ಎಂಟುರೂಪಾಯಿಗಳನ್ನಾದರೂ ದುಡಿಯುತ್ತಿದ್ದಾನೆ ಎಂಬುದನ್ನು ವಿಚಾರಿಸುವಾಗ ದಾರಿದ್ರ್ಯವೆಲ್ಲಿದೆ? ಬಂಜರು ಬಿದ್ದಿರುವ ಬಯಲುಗಳೋ ಮೈದಾನುಗಳೋ ಬೇಕಷ್ಟಿರುವ ಈ ಕಾಲದಲ್ಲಿ ನಿರುದ್ಯೋಗದ ಪ್ರಶ್ನೆಯೆಲ್ಲುಳಿಯಿತು? ಹಳ್ಳಿಯಲ್ಲಿ ಈ ಸಮಸ್ಯೆಯೇ ಇರುವುದಿಲ್ಲ. ದಿನದ ನಾಲ್ಕು-ಆರು ತಾಸಿನ ಮೈದಣಿವ ಕೆಲಸದಿಂದ ಒಬ್ಬನು ಸಣ್ಣ ಕುಟುಂಬವನ್ನೇ ಸ್ವಾವಲಂಬದಿಂದ ನಡೆಸಬಹುದಾಗಿದೆ ಸರಳಜೀವನದ ಅಭ್ಯಾಸವು ಹಳ್ಳಿಗಳಲ್ಲಿ ಮೂಲೆ ಪಾಲಾಗಿ, ದುಶ್ಚಟಗಳೂ, ಚಿಲ್ಲರೆ ಖರ್ಚಿನ ದುರ್ವ್ಯಯಗಳೂ ಹಳ್ಳಿಗಳಲ್ಲೂ ತುಂಬುತ್ತಾ ಹೋಗಿವೆ. ಇದು ನಾಗರಿಕತೆಯ ಲಕ್ಷಣವಲ್ಲ. ದಾರಿದ್ರ್ಯದ ಸೂಚನೆ. ಹಬ್ಬ ಹವನಗಳ, ಮದುವೆ ಮುಂಜಿಗಳ ಖರ್ಚನ್ನೂ ಶೇಕಡಾ ಎಂಭತ್ತರಂತೆ ಬಲು ಸುಲಭದಲ್ಲಿ ಇಳಿಸಬಹುದು. ಅದೇ ಖರ್ಚಿನ ಉಳಿತಾಯವು ಅಂಥಾ ಮೂರು ದರಿದ್ರ ಕುಟುಂಬಗಳನ್ನೇ ಸೌಖ್ಯದಲ್ಲಿ ಆಳಬಲ್ಲದು. ತಿಂದು ಅಜೀರ್ಣವಾಗಿ ಖರ್ಚಾಗುವ, ಹುಳಿತು ಹಾಳಾಗಿಹೋಗುವ, ಗಿಲಿಟು ಮಿರುಗುಗಳಿಗೆ ವ್ಯಯವಾಗುವ ಹಣವೆಷ್ಟೆಂಬುದನ್ನು ಒಂದು ಘಳಿಗೆ ಕೂತು ಎಣಿಸಿದರೆ ಎದೆಯು ಬೆವರುವುದಿಲ್ಲವೇ? ಹಳ್ಳೀ ಉಪಾಧ್ಯಾಯನೊಬ್ಬನು ವರ್ಷವೊಂದರ ನೂರು ರೂಪಾಯಿ ಸಂಪಾದಿಸುವುದಾದರೆ, ಅವನಿಗೆ ಈಗಿನ ಕಾಲದಲ್ಲಿ ಬೀಡಿಬೀಡಗಳಿಗೂ, ಕನ್ನಡಿ ಬಾಚಣಿಗೆಗಳಿಗೂ ಸಾಬೂನು ಟಿವೆಲ್‌ಗಳಿಗೂ (ಇವಿಷ್ಟೂ ಅನಾವ್ಯಯ!) ಐವತ್ತು ರೂಪಾಯಿಗಳಾದರೂ ಸೂಕ್ಷ್ಮದಲ್ಲಿಯೂ ಬೇಕಾಗುತ್ತವೆ ಎರಡು ಅಂಗಿ, ನಾಲ್ಕು ವಸ್ತ್ರಗಳು ನಿಜವಾಗಿ ಸಾಕಾಗುವ ಒಬ್ಬನು ಐವತ್ತು ರೂಪಾಯಿಗಳನ್ನಾದರೂ ಅವುಗಳ ಬಗ್ಗೆಯೇ ಹೆಚ್ಚಾಗಿ ವ್ಯಯಿಸುತ್ತಾನೆ. ಸಾಲಗಾರನಾಗುತ್ತಾನೆ; ಬಳಲಿ ಬೆಂಡಾಗಿ ತನ್ನ ಹಳ್ಳೀ ಮನೆ ಒಳಕೋಣೆಯಲ್ಲೇ ಮಲಗಿ ತತ್ತರಿಸುತ್ತಾನೆ. ಅಂತೆಯೇ

ಉತ್ಸಾಹೀ ಮನಸ್ಸಿನ ತರುಣರು ತಮ್ಮ ಮುಂದಿನ ಜೀವನವೆಂತು ಸಾಗೀತು? ತಾವಿರುವ ಹಳ್ಳಿಯ ಸ್ಥಿತಿ ಹೇಗಿದೆ? ತನಗಿಂತ ಹೆಚ್ಚಿನ ತನ್ನ ಹಿರಿಯರು ಇಂದು ಸ್ಥಾನಚ್ಯುತರಾದುದಕ್ಕೆ ಕಾರಣವೇನು?-ಎಂಬುದನ್ನು ವಿಚಾರಿಸಿಕೊಳ್ಳದೆ, ಮದುವೇ ಆಟಕೂಟನೋಟಾದಿಗಳ ಸಂದರ್ಭದಲ್ಲಿ ಪರದೇಶೀ ಕಂಪನಿಗಳ ಮಾರ್ಕೇಟುಗಳಂತೆ, ಪೌಡರ್-ಸ್ನೋ-ಹೇರ್ ಓಯಿಲ್–ರೇಸರ್–ಶೂಸ್-ಮಫ್ಲರ್ ಇತ್ಯಾದಿಗಳಿಗಾಗಿ ವ್ಯಯಿಸುವ ಹಣವೆಷ್ಟು? ಏನು ಸಾರ್ಥಕತೆ? ಪೇಟೆಯಲ್ಲಿ ಬಂದಹೋದವರನ್ನೆಲ್ಲಾ ಕಾಫಿಸಿಗರೇಟ್ ತಿಂಡಿಗಳಿಂದ ತಣಿಸಿ-ಕುಣಿಸಿ ಮೆರೆದಾಡುವ ನಾಗರೀಕರೆಂಬ 'ಟ್ರೇಡ್ ಮಾರ್ಕಿ'ನ ನವನೂತನ ವೇಷಧಾರೀ ತರುಣರು ತಮ್ಮ ಆಯುವೇನು? ತಾವು ಯಾರ ಅನ್ನವನ್ನುಂಡು ಬದುಕುತ್ತಿದ್ದೇವೆ? ಮನೆಯಲ್ಲಿ ನೀರು ಕುಡಿಯಲು ಬೆಲ್ಲವಿಲ್ಲದ–ಬೆಂಕಿ ಹೊತ್ತಿಸಲು ಬೆಂಕಿಪೆಟ್ಟಿಗೆಯಿಲ್ಲದ–ತಮ್ಮ ದಾರಿದ್ರ್ಯಾವಸ್ಥೆಯು ಬರಿ ಗಿಲಿಟಿನ ಥರದೆಯಿಂದ ದೀರ್ಘಕಾಲ ಸುರಕ್ಷಿತವಾಗಿರದು, ಎಂದೇಕೆ ಹಂಬಲಿಸುವುದಿಲ್ಲ? ಸಂಪಾದನೆಗೆ ತಡೆಯಿದ್ದರೂ ಖರ್ಚುಮಾಡುವುದನ್ನು ನಿಲ್ಲಿಸಿದರೆ, ಲೆಕ್ಕ ಹಾಕಿ ನೋಡಿದರೆ ಸಂಪಾದನೆಯು ಆದಂತಾಗದೇ? ಬಿ. ಎ. ಕಲಿತು ಇಪ್ಪತ್ತು ಸಂಪಾದಿಸಿ, ಯೋಗ್ಯತೆಯನ್ನುಳಿಸುವ ಬಗ್ಗೆ ಇಪ್ಪತ್ತೈದು ಖರ್ಚುಮಾಡುವ ನವನಾಗರಿಕ ಕಲಿತ ಯುವಕನಿಗಿಂತಲೂ, ಖರ್ಚಿಲ್ಲದೆ ಐದು ರೂಪಾಯಿ ದುಡಿಯುವ ಹಳ್ಳೀ ಬಡಕೃಷಿಕನು ಧನ್ಯನಲ್ಲವೇ? 'ಸೋಡಾ ವಾಟರ್ ಗೇಸ್'ನ ರೀತಿಯ ಹೆಸರಿನ ಇಂಗ್ಲಿಷ್ ವಿದ್ಯಾಭ್ಯಾಸದ ತಾತ್ಕಾಲಿಕ ಆಡಂಬರವು ಹಳ್ಳೀ ಸಾಮ್ರಾಜ್ಯವಾದ ಭಾರತವರ್ಷಕ್ಕೆ ಸಲ್ಲದು. ಮಳೆಗಾಳಿಗಳಿಂದ ಬದುಕುವ ನಮಗೆ ಕೃಷಿಯೇ—ಕೃಷಿಕ್ಷೇತ್ರ ಹಳ್ಳಿಯೇ, ಆಧಾರವೆಂಬುದು ನೆನಪಿರಬೇಕು.

ಭಂಡವಾಳವು ಇದ್ದೇ ತೀರಬೇಕು, ಇಲ್ಲದಿದ್ದರೂ ಮುಂದರಿಸುವ ಧೈರ್ಯವು ನಮ್ಮಲ್ಲಿರಬೇಕು. ಅದರಲ್ಲೂ ಭಂಡವಾಳವನ್ನು ಕಾದು ಕೂತುಕೊಳ್ಳುವ ಸಮಯವೂ ಇದಲ್ಲ. ಹಾಗೆ ಕುಳಿತಿರುವುದು ನಮ್ಮ ಹಳ್ಳಿಗರ ಕೆಲಸವೂ ಅಲ್ಲ. ನಮ್ಮ ಕರ್ತವ್ಯವನ್ನು ನಾವು ಮರೆತು—ಇತರರಿಗೆ ಕೈತೋರಿಸಿ ಆಳಬಾರದು.

## ಮಹಿಳೆಯರು ಎಚ್ಚತ್ತಿರಬೇಕು.

ಹಳ್ಳಿಯ ಹೆಂಗುಸರು ಅವರಿರುವ ವಾತಾವರಣದಷ್ಟು ಒರಟರಲ್ಲ. ಕಷ್ಟಸಹಿಷ್ಣುಗಳಾದ ಅವರು ಈ ಎರಡು ಸೂಚನೆಗಳನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕು. "ಮುಂಡೆ!" ಎಂದು ಹೇಳಲಿಕ್ಕೆ ಬಾರದ ಎಳೆ ಮಕ್ಕಳು "ಮುಂಡೆ" ಎಂದು ಸುಲಭವಲ್ಲಿ ಹೇಳುವಂಥಾ ರೀತಿಯು ತಾಯಿಯಂದಿರ ಸ್ವಭಾವಕ್ಕೆ, ತರಬೇತಿಗೆ ಸರಿಯಾಗಿ ಅವುಗಳಿಗೆ ಬರುತ್ತದೆ. ಆದ್ದರಿಂದ ತಮ್ಮ ಜವಾಬ್ದಾರಿಯು ತಮ್ಮ ಮಕ್ಕಳ ಮೇಲೆ ಬರೇ ಹೊಟ್ಟೇ ಪಾಡಿನಷ್ಟೇ ಎಂದು ಹೆಂಗುಸರು ಎಣಿಸದೆ ಮಕ್ಕಳನ್ನು ಪ್ರೀತಿಯಿಂದ ಸೌಮ್ಯರೀತಿಯಲ್ಲಿ ತಿದ್ದಬೇಕು. ಗುಣದಿಂದ ಹೇಳಿದರೆ ಕೇಳದ ಮಕ್ಕಳು ಗದರಿಕೆಗೂ ಬೈಗಳಿಗೂ ಬಾಯಿ ಮುಚ್ಚಿ ಮೂಲೆ ಸೇರುವುದು, ತಾಯಿಯಂದಿರ ನಿಜರೂಪವನ್ನು ಸಾರುತ್ತದಲ್ಲವೇ? ಗುರುಹಿರಿಯರ ಅತ್ತೆಮಾವಂದಿರ ಮರ್ಯಾದೆಯನ್ನು ಕಲಿತ ಹಳ್ಳೀ ಹೆಂಗಸರು, ತಮ್ಮ ಮಕ್ಕಳು ಮರಿಗಳ-ಮನೆಬಿಡದ ಈ ಮೂಗಜೀವಿಗಳ-ಆಧಾರಸ್ತಂಭರೆಂಬುದನ್ನೂ, ಜನಾಂಗದ ಅಸ್ತಿವಾರವು ತಮ್ಮಿಂದಲೇ ಹಾಕಲ್ಪಡುತ್ತಿದೆ ಎಂಬುದನ್ನೂ ನೆನಪಿನಲ್ಲಿಟ್ಟುಕೊಂಡು ಮುಂದರಿಯಬೇಕು. 'ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲ' ಎಂಬುದು ನಿಜವಷ್ಟೆ!

ಹುಡುಗಿಯರು ತಮ್ಮ ಮದುವೆಯ ಸನ್ನಾಹವನ್ನು ತಾವೇ ಮಾಡಿಕೊಂಡಿರಬಹುದು. ಅಣ್ಣ ತಮ್ಮಂದಿರನ್ನೇ ನಂಬಿ ದಾರಿಯಲ್ಲಿ ಬೀಳುವ ಪ್ರಸಂಗವು ತಪ್ಪಬೇಕಾದರೆ ಅವರು ಸ್ವಾವಲಂಬಿಗಳಾಗಿರಬೇಕು. ಎಂಟು ಹತ್ತು ವರ್ಷದ ಹುಡುಗಿಯರು, ಆಗಲೇ ಸಣ್ಣ ಪುಟ್ಟ ಉಪವೃತ್ತಿಗಳಿಂದ ಸಂಪಾದಿಸಬಹುದು. ದನ ಎಮ್ಮೆ-ಆಡುಕುರಿಕೋಳಿಗಳನ್ನು ಸಾಕುವುದರಿಂದ ವರ್ಷಕ್ಕೆ ಕಡಿಮೆಯಲ್ಲೂ ಇಪ್ಪತ್ತೈದು ರೂಪಾಯಿ ಸಂಪಾದಿಸಬಹುದು. ಇನ್ನು ಬಾಳೆ ಕಂಗು-ಹೂಕಾಯಿಗಳಿಂದಲೂ, ಹೊಲಿಗೆಯ, ಹುರಿಹಗ್ಗದ, ಮಾವ ಅಣ್ಣಂದಿರ ಬಟ್ಟೆಬರೆ ಒಗೆಯುವುದರ ಮೂಲಕ ಇಪ್ಪತ್ತೈದು ರೂಪಾಯಿಗಳನ್ನಾದರೂ ಉಳಿಸಬಹುದು ಪ್ರಾಯಕ್ಕೆ ಬರುವಾಗ ಒಬ್ಬ ತರುಣಿಯು ತನಗೆ ಬೇಕಾದ ಚಿಲ್ಲರೆ ನಗನಾಣ್ಯಗಳನ್ನು ಮಾಡಿಕೊಂಡು

ಇನ್ನೂರು ಮುನ್ನೂರು ರೂಪಾಯಿ ಮಿಗಿಸಿಕೊಳ್ಳಲು ಸಾಮಾನ್ಯ ಸಮರ್ಥ ಳಿರಲೇಬೇಕು. ಇದು ಬರೀ ಅಂಕೆ ಸಂಖ್ಯೆಗಳ ಮಾತಲ್ಲ; ಕೆಲವೆಡೆ ನಡೆಯುತ್ತಲೂ ಇರುವ ಬದುಕುವ ರೀತಿಯು ಋಜುಮಾರ್ಗವಿದೆ. ಇಂಥಾ ತರುಣಿಯರಿಗೆ ಯೋಗ್ಯವರನು ಅನಾಯಾಸವಾಗಿ ದೊರೆಯು-ವುದರಲ್ಲಿ ಸಂಶಯವಿಲ್ಲ. ಇದು ಮಾದರಿಯ ಜೀವನವಾಗಿದೆ; ಅಲ್ಲದೆ ಸಮಾಜದ ಕುರುಡು ಕಣ್ಣುಗಳಿಗೆ ಯೋಗ್ಯ ಔಷಧಿಯೇ ಆಗಿರುತ್ತದೆ. ತಮ್ಮ ಗಂಡಸರ ಒಣದರ್ಬಾರಿಗಾಗಲಿ, ಗಿಲಿಟಿನ ಮಾತಿಗಾಗಲೀ, ಮರುಳಾಗಿ, ತಮ್ಮ ಕಷ್ಟದ ಈ ರೀತಿಯ ಲಾಭದ ಕೂಡಿಕೆಯನ್ನು ಕೊಟ್ಟುಬಿಡುವ ದುರಭ್ಯಾಸವು ಮಾತ್ರ ಮಹಿಳೆಯರಲ್ಲಿ ಇರಲೇ ಬಾರದು. ತಮ್ಮ ಮರ್ಯಾದೆಯನ್ನುಳಿಸುವುದೆಂದರೆ ಬರಿ ಘರದೇಯ ವಸ್ತ್ರದಿಂದಾಗಲಿ, ಓರೆ ಬೈತಲೆಯ ಬೆಡಗಿನಿಂದಾಗಲಿ, ಸಮಾಜದ ಗೊಡ್ಡು ಆಚಾರದಿಂದಾಗಲಿ ಅಲ್ಲವೆಂಬುದು ಹಳ್ಳೀ ಹೆಂಗಸರ ಸ್ಮೃತಿಪಥದಲ್ಲಿರಬೇಕು

## ಹಳ್ಳಿಗರೆಂದೆನ್ನಿಸಿಕೊಳ್ಳಲು ಯುವಕರು ನಾಚಬಾರದು

ಇದೀಗ ಹಳ್ಳಿಗಳ ಸರದಿ. ಪೇಟೆ ಪಟ್ಟಣಗಳು ಹಳ್ಳಿಗರಿಗಾಗಿ! ಅವು ಹಳ್ಳಿಗರ ಪರಿಶ್ರಮದ ಬಾವುಟಿಗಳು. ಅವುಗಳ ಉಪಯೋಗವನ್ನು ಹಳ್ಳಿಗರೇ ಪಡೆಯಬೇಕಾದುದು. ಹಳ್ಳಿಗಳು ಪೇಟೆಗಳಿಂದ ಬದುಕುವುದಿಲ್ಲ. ಪೇಟೆಗಳು ಹಳ್ಳಿಗರಿಂದ ಬದುಕುವುದು' ಎಂಬುದೂ ಹಳ್ಳಿಗಳ ನಿಜ ಸಾಮರ್ಥ್ಯ ಎಷ್ಟಿದೆ ಎಂಬುದೂ, ಅದು ಶಿಸ್ತಿನಿಂದ ಮುಂದುವರಿಸಿದರೆ ಮೂಗಿಗೆ ಬೆರಳಿಡುವಷ್ಟು ತೀವ್ರವೇ ಸ್ವಾತಂತ್ರ್ಯವು ಸಾಧ್ಯವಿದೆ ಎಂಬುದು ಯುವಕ ಯುವತಿಯರಿಂದ ಗೊತ್ತಾಗಬೇಕಾಗಿವೆ-ಅವರಿಂದ ಹಳ್ಳಿಗಳಲ್ಲಿ ಕ್ರಾಂತಿ-ಅಂದರೆ ಕೆಲಸವಲ್ಲಿ ನವಚೇತನ; ಎದೆಗುಂದದೆ, ಅವುದನ್ನೂ ಆರನ್ನೂ ಎದುರಿಸಿ ಸರಿಮಿಗಿಲಾಗಿ ಮುಂದರಿದು ಗುರಿಮುಟ್ಟುವ ಮನೋ ನಿರ್ಧಾರಗಳು ಬೇರೂರಿ ಕಾರ್ಯತಃ ಪ್ರಸಾರವಾಗಬೇಕು ಹಳ್ಳಿಗಿಳದು ನೋಡಿದರೆ ಈ ಕಾಲದ 'ಹೆಸರಿನ ವಿದ್ಯಾಭ್ಯಾಸವ'ನ್ನು ಪಡೆದ (ಎಡ್ಯುಕೇಟೆಡ್) ತರುಣರು ಶೇಕಡಾ ನಾಲ್ಕೈದು ಇರಬಹುದು. ಆದರೆ 'ನಿಜವಾದ ವಿದ್ಯಾಭ್ಯಾಸ'ವನ್ನು (ಸ್ವತಂತ್ರ ಜೀವನೋಪಾಯ) ಹೊಂದಿ

ಅನುಭವಿಗಳಾದವರು ನೂರರಲ್ಲಿ ತೊಂಭತ್ತಾರು ಮಂದಿ ಎಂಬುದು ಸ್ವಯಂ ವಿದಿತವಿದೆ. ಆಂಗ್ಲೇಯಾನುಕರಣೆಯ ತರಬೇತಿಯಿಂದ ಹದರಾದ-ಹತಾಶರಾದ ನಮ್ಮ ತರುಣರು ಹಳ್ಳಿ ಕೈಗಾರಿಕೆ (ಕೃಷಿ, ವ್ಯಾಪಾರ, ಕೈಗಾರಿಕೆ)ಗಳನ್ನು ಮರೆತು ಪೇಟೆ ಪಟ್ಟಣಗಳಲ್ಲಿ ಚಾಕರಿತನವೊಂದೇ ಪವಿತ್ರತೆಯ ಸುಗಮ ದಾರಿಯೆಂದು ಭ್ರಮಿಸಿ, ತಮ್ಮ ಏಕಮಾತ್ರ ಹೊಟ್ಟೆ ಬಟ್ಟೆಗೂ ಸಾಕಾಗದ ನೌಗರಿಗಾದರೂ ಕಾದು, ವರ್ಷಗಟ್ಲೆಯಲ್ಲಿ ನಿರುದ್ಯೋಗಿಗಳಾಗಿ ಬೀದಿಗಳಲ್ಲಲೆಯುವುದೇ ಪುರುಷಾರ್ಥವೆಂದು ಕಟ್ಟಿಕೊಳ್ಳುತ್ತಾರೆ. ತಾವು 'ಛೀ' ಎಂದು ತುಚ್ಛೀಕರಿಸುವಂಥಾ ಹಳ್ಳೀ ಉತ್ಪತ್ತಿಯ ಮೇಲೆ ತಮ್ಮ ಸಂಪೂರ್ಣ ಖರ್ಚಿನ ಜವಾಬ್ದಾರಿಯನ್ನು ಹಾಕಿಬಿಟ್ಟು ಜಿಗಣೆಗಳಂತೆ ಜೀವಿಸುವುದನ್ನು ಮರೆತಿರುತ್ತಾರೆ. ಮೇಲಾಗಿ ಹಳ್ಳಿಗರ ಮೌಢ್ಯತೆಯನ್ನೂ, ನೀತಿ ನೈರ್ಮಲ್ಯದ ಟೀಕೆ ಟಿಪ್ಪಣಿಗಳನ್ನೂ ಉದ್ದುದ್ದ ಲೇಖನಗಳಿಂದಷ್ಟೇ ಪ್ರಕಟಿಸಿ, ಕನ್ನಡಿಯೊಳಗಿನ ಗಂಟಿನಂತೆ ಬೋಧಿಸುವರಲ್ಲದೆ, ಹಳ್ಳಿಗರನ್ನು ತಿದ್ದಲು ಆ ವಿಚಾರದಲ್ಲಿ ಪರಿಷ್ಕಾರವಾದ ಕಾರ್ಯವನ್ನು ಕೈಕೊಳ್ಳಲು ತಿಂಗಳಿಗೊಂದು ದಿನವಾದರೂ ಹಳ್ಳಿಗಿಳಿದು ಪ್ರಯತ್ನಿಸುವುದಿಲ್ಲ. ಇದರಿಂದ ಕತ್ತುನೀಡಿ ಹಂಗಿನೊಳಗೆ ಬದುಕುವ ಪರಾವಲಂಬನದ ಹೆದ್ದಾರಿಯನ್ನು ನಮ್ಮ ಕಿರಿಯರಿಗೂ ತೋರಿಸಿ ಕೊಟ್ಟಂತಾಗುತ್ತದೆ.

ಪ್ರತಿಯೊಬ್ಬ ತರುಣನೂ ತಾತ್ಕಾಲಿಕವಾದ ಅನುಕರಣೆಗೆ ಬಲಿಬೀಳದೆ, ತನ್ನ ತನ್ನ ಮನೆಗ್ರಾಮಗಳಲ್ಲೇ ತನ್ನ ಪೇಟೆ ವಾಸದ ಅನುಭವವನ್ನೂ, ಹಳ್ಳಿಗರ ಜೀವನಕ್ರಮದ ಸೂತ್ರವನ್ನೂ ತೋರಿಸಿಕೊಡಬಹುದಾಗಿದೆ. ಹಣದ ಸಹಕಾರಿ ಸಂಘಗಳಂತೆಯೇ, ಪರಸ್ಪರ ಜನರ ಸಹಕಾರ ಸಂಘಗಳಿಂದ, ಸಾಗುವಳಿ ಸಮಯಗಳಲ್ಲಿ ಪರಸ್ಪರ ಪುಕ್ಕಟೆಯಾಗಿ (ಬದ್ಲಿಗಾಗಿ) ಗೇದು-ಇಡೀ ಕೇರಿಯೇ ತನ್ನ ಮನೆಯೆಂಬ ಭಾವನೆಯಿಂದ, (ದರ್ಪವನ್ನು ಬದಿಗಿಟ್ಟು), ಸ್ವತಃ ದುಡಿಯಬೇಕು. ಜಾತ್ರೆ-ಕಂಬಳ-ಆಟ-ಉತ್ಸವಾದಿಗಳಲ್ಲಿ ಹಳ್ಳೀ ಕೂಟಗಳೊಂದಿಗೆ ಬೆರೆತು ಹಳ್ಳಿಗರನ್ನು ತರಬೇತಿಗೊಳಿಸುವುದರ ಮೂಲಕ, ಹಾಳು ಕ್ರಮಗಳನ್ನೂ ಅಂಧಶ್ರದ್ಧೆಗಳನ್ನೂ ತೊಲಗಿಸ

ಬೇಕು. ಹಳ್ಳೀ ಉತ್ಪತ್ತಿಗಳಾದ, ಭತ್ತ, ತೆಂಗಿನಕಾಯಿ, ಅಡಿಕೆ, ಗೆಣಸು, ಮೆಣಸು, ಬೆಲ್ಲ, ವೀಳ್ಯದೆಲೆ, ಶುಂಠಿ, ಒಳ್ಳೆಮೆಣಸು, ಕಬ್ಬು, ಅರಸಿನ,ಕಾಡ ಬೀಜಗಳು–ಇತ್ಯಾದಿ ಉತ್ಪತ್ತಿ–ಉಪಯೋಗಗಳನ್ನು ಬಿಡಿಸಿ ತೋರಿಸ ಬೇಕು.—ಶಾಲೆಗಳಿಗೆ ಬಿಡುವಿದ್ದಾಗ ಹೋಗಿ ತನ್ನ ಸೂಚನೆಗಳನ್ನಿತ್ತು ಪ್ರಯತ್ನಿಸಬೇಕು.–ಮನೆಮನೆಗಳಲ್ಲಿರುವ ದೇವರ ಡಬ್ಬಿಯ ಉಪಯೋಗವು ದೇವರ ಸೃಷ್ಟಿಯೇ ಆಗಿರುವ ನಮ್ಮ ದೇಶದ ಕಲ್ಯಾಣಕ್ಕಾಗಿ,– ಸ್ವಾತಂತ್ರ್ಯಕ್ಕಾಗಿ ಎಂಬುದನ್ನು ಯುಕ್ತಾಯುಕ್ತವಾಗಿ ಸಾರಿ–ಆ ಫಂಡು ಗಳನ್ನು ಹಳ್ಳಿಯೇಳ್ಗೆಯ ಕೋಂಗ್ರೆಸ್ ಫಂಡಾಗಿ ಮಾರ್ಪಡಿಸಿ ವ್ಯಯಿಸ ಬೇಕು.

ಸಿಥಾರಿರದ ತಾಳ್ಮೆಯ ಮನಸ್ಸಿನಿಂದ, ತೃಪ್ತಿಯ ಮುಖಮುದ್ರೆ ಯಿಂದ ಸದಾ ಸಿದ್ಧವಾದ (Everready) ಹುರುಪಿನಿಂದ ತೊಡಗಿದ ಆವ ಕೆಲಸವೂ ಫಲಿಸೀತು! ನಿರುದ್ಯೋಗದ ಪ್ರಶ್ನೆಗೆ ಉತ್ತರವು ದೊರೆತೀತು! ಹಳ್ಳಿಗರೆಂಬುದು ಅಭಿಮಾನದ ಮಾತಾಗಿ ಮೆರೆದೀತು!

(ಮುಂದಿನ ಸಂಚಿಕೆಯಲ್ಲಿ:—**ಕೃಷಿಸಾಮ್ರಾಜ್ಯ!**)



# ನೇಗಿಲಯೋಗಿ

(ನಿಂಜೂರು ವಿವೇಕಾನಂದ ಸೇವಾಸಂಘದಿಂದ)

ಹಿಂದೂದೇಶದ ಆರ್ಥಿಕತೆಯು ಅತಿಭಯಂಕರ ಸ್ವರೂಪವನ್ನು ತಾಳಿದೆ. ಈದುಃಸ್ಥಿತಿಯನ್ನು ನಿವಾರಿಸುವ ಸಾಮರ್ಥ್ಯವು ಸರಕಾರಕ್ಕಲ್ಲದೆ ಬೇರಾವ ಸಂಘ ಸಂಸ್ಥೆಗಳಿಗೂ ಇರುವುದಿಲ್ಲ. ಸರಕಾರವು ಈ ವಿಷಯದಲ್ಲಿ ಉಪೇಕ್ಷೆಯನ್ನು ತಾಳಿದೆ. ರೋಗಿಗೆ ಔಷಧೋಪಚಾರವನ್ನು ಮಾಡುವುದಿಲ್ಲವೆಂದು ವೈದ್ಯನು ಮುಷ್ಕರ ಹಿಡಿದರೆ, ಚಿಕಿತ್ಸಾನುಭವವಿಲ್ಲದಿದ್ದರೂ, ರೋಗಿಯ ಹಿತಚಿಂತಕರು ಹೇಗೆ ಅನುಪಾನಾದಿಗಳಿಂದ ಅವನನ್ನು ಬದುಕಿಸಲೆತ್ನಿಸುವರೋ ಅದರಂತೆ – ಕೈಲಾಗದ ಕೆಲಸವೆಂದು ತಿಳಿದರೂ, ಅದಕ್ಕೆ ಕೈಹಚ್ಚುವ ಜವಾಬ್ದಾರಿಯು ದೇಶಸೇವೆಗಾಗಿ ಜನ್ಮಧಾರಣೆಯನ್ನು ಮಾಡಿದ ಪ್ರತಿಯೊಂದು ಸಂಘ ಸಂಸ್ಥೆಗಳ ಮೇಲೆ ಬಿದ್ದಿರುತ್ತದೆ.

ಹಿಂದೂದೇಶವು ಒಂದು ವೃಕ್ಷವಾದರೆ, ಹಳ್ಳಿಗಳು ಅದರ ಬೇರೆನ್ನಬೇಕು. ವೃಕ್ಷವು ಜೀವಂತವಾಗಿ, ಹೂತಳಿರನ್ನು ಬಿಡಬೇಕಾದರೆ, ಅದರ ಬೇರುಗಳು ಸತುವಾಗಿರಬೇಕು. ಆದರೆ ನಮ್ಮ ದೇಶವೃಕ್ಷದ ಬೇರುಗಳೀಗ ನಿತ್ರಾಣದಿಂದ ನಿರ್ಜೀವವಾಗಿರುವುದರಿಂದ ವೃಕ್ಷದ ಮೂಲೋತ್ಪಾಟನವಾಗಿದೆ. ಆದ್ದರಿಂದ ನಮ್ಮ ದೇಶದ ಉನ್ನತಿಯೆಂತು ಸಾಧ್ಯವಿದೆ.

ಹಿಂದೂದೇಶದ ಆತ್ಮವೇ, ಹಳ್ಳಿಯ ಕೃಷಿಕನು. ಅವನು ನಮ್ಮ ರಾಷ್ಟ್ರೀಯ ಜೀವನದಲ್ಲಿ ಮೊದಲನೇ ಸ್ಥಾನವನ್ನು ಪಡೆಯಲು ಯೋಗ್ಯನಿರುತ್ತಾನೆ. ಅವನು, ಸಮಾಜಕ್ಕೆ ಜ್ಞಾನಬೋಧಕರಾದ ಸನ್ಯಾಸಿಗಳಿಗಿಂತಲೂ ಉತ್ತಮನು. ಏಕೆಂದರೆ ಸನ್ಯಾಸಿಗಳಿಗೂ ಹಿಟ್ಟುಬಟ್ಟೆಗಳನ್ನು ಅವನೇ ಒದಗಿಸಿಕೊಡುತ್ತಾನೆ. ಹಾಗೆಯೇ ಪೇಟೆಪಟ್ಟಣಗಳಲ್ಲಿ ಗೇಯುತ್ತಿರುವ ಕಾಮಗಾರಿಗಳೂ, ಕೂಲಿಗಳೂ, ತೋಟಿಗರೂ, ಇವ

ರೆಲ್ಲಾ ಸಮಾಜದಲ್ಲಿ ಎರಡನೆಯ ಸ್ಥಾನವನ್ನು ಹೊಂದಲು ಅರ್ಹರಿರುತ್ತಾರೆ. ಆದರೇನು? ಮಜೂರರ ಈ ಸಾಮ್ರಾಜ್ಯದಲ್ಲಿ ಮೌನವು ರಾಜ್ಯವಾಳುತ್ತಿದೆ. ಕೃಷಿಕ, ಕಾಮಗಾರಿ ಹಾಗೂ ಕೂಲಿಗಳು ಮೂಕರಾಗಿದ್ದಾರೆ. ಅವರ ಮೌನ ಮುದ್ರೆಯನ್ನು ಒಡೆಯುವವರಾರು? ಅವರ ಗೀತೆಯನ್ನು ಹಾಡುವವರಾರು? ಅವರ ಜೀವನದಲ್ಲ ಅಡಕವಾದ ರಾಮಾಯಣ ಭಾರತಾದಿಗಳನ್ನು ಕಥಿಸುವವರಾರು? ಹಿಂದೂದೇಶವು ಮಜೂರರ ಕಥಾನಕವನ್ನು ಹಾಡಲಿರುವ ನಿಸರ್ಗಕವಿಯ ಆವಿರ್ಭಾವವನ್ನು ಇದಿರುನೋಡುತ್ತಿದೆ!

ಹಿಂದೂದೇಶದ ಮಹಾಜನರೆಂದರೆ ಮಜೂರರಲ್ಲದೆ, ಅಲ್ಪಸಂಖ್ಯಾಕರಾದ, ಮಹಾರಾಜರು, ಜಮೀನುದಾರರು, ಪದವೀಧರರು ವಕೀಲರು, ಪಂಡಿತರು ಎಂದೂ ಆಗಲಾರರು. ನಮ್ಮ ಜನರಿಗೆ ರಾಜ, ಮಹಾರಾಜರ ಮೇಲೆ ಅವಿರಳ ಪಕ್ಷಪಾತವು ಪರಂಪರೆಯಾಗಿ ಬಂದಿರುತ್ತದೆ. ನಮ್ಮ ಕಥೆಗಳೆಲ್ಲಾ ಒಬ್ಬ ರಾಜ, ಒಂದು ರಾಣಿ, ಇವರ ಕಥೆಗಳಾಗಿವೆ. ರಾಜ ರಾಣಿಯರಿಲ್ಲದ ಕಥೆಗಳಿಲ್ಲ, ಕವನಗಳಿಲ್ಲ. ಶ್ರೀಮಂತಿಕೆಯ ಮೇಲೆ ನಮಗಷ್ಟು ಪಕ್ಷಪಾತ. ನೀರೆಲೆ, ಬೇರುಗಳು ಪ್ರವಾಹದ ಮೇಲ್ಭಾಗದಲ್ಲಿ ತೇಲಾಡುತ್ತಿರುವುದು ತಮ್ಮ ಲಘುತ್ವದಿಂದಲ್ಲದೆ, ತಮ ಸ್ವಶಕ್ತಿಯ ಸಾಮರ್ಥ್ಯದಿಂದಲ್ಲ. ಹಾಗೆಯೇ ರಾಜರು, ಜಮೀನುದಾರರು ಮೊದಲಾದವರು ಸಮಾಜದ ಮೇಲ್ಭಾಗದಲ್ಲಿ ಲೋಲರಾಗಿ ಮೇಳೈಸುತ್ತಿದ್ದಾರೆ. ಅಮೂಲ್ಯವಾದ ಮುತ್ತುಗಳು ಸಮುದ್ರತಳದಲ್ಲಿ ಅಡಗಿರುವಂತೆ-ಮಜೂರರು ಸಮಾಜದ ಅಡಿಭಾಗದಲ್ಲಿದ್ದಾರೆ. ಮಜೂರರೇ ನಮ್ಮ ದೇಶದ ಕಾಮಧೇನುಗಳು; ಅವರೇ ನಮ್ಮ ಸಂಪತ್ತಿಗೆ ಕಾರಣಭೂತರು. ನಮಗೆ ಹಿಟ್ಟು ಬಟ್ಟೆಯನ್ನೂ ಮನೆ ಮಠಗಳನ್ನೂ ಇತರ ಸೌಕರ್ಯಗಳನ್ನೂ ಒದಗಿಸಿ ಕೊಡುವವರು ಅವರೇ ಆಗಿರುತ್ತಾರೆ. ಅವರು ನಮಗೆ ಅನ್ನದಾತರಾಗಿರುವುದರಿಂದ ಕೃಷಿಕನೇ ನಮ್ಮ ಸಮಾಜದ ಪೋಷಕನು. ಎಲ್ಲಾ ಶಕ್ತಿ ಸಾಮರ್ಥ್ಯಗಳಿಗೆ ಅವನೇ ಮೂಲಪುರುಷನಾಗಿರುವುದರಿಂದ ಕೃಷಿಕನೇ ಸೂರ್ಯನು; ಬಾಕಿ ಉಳಿದವರು ಅವನಿಂದ ಬೆಳಗಿಸಲ್ಪಡುವ ಗ್ರಹೋಪಗ್ರಹಗಳು.

ಕಾಮಗಾರಿಯು ಕೃಷಿಕನ ಕೆಲಸವನ್ನು ಪೂರ್ಣಗೊಳಿಸುತ್ತಾನೆ. ಹತ್ತಿ, ಮರ, ಲೋಹ, ಚರ್ಮ ಇತ್ಯಾದಿ ಅಸಿದ್ಧ (Raw) ಪದಾರ್ಥಗಳಿಗೆ ಅವನು ಸ್ವರೂಪವನ್ನು ಕೊಡುತ್ತಾನೆ. ಅವನು ನವನಾಗರೀಕತೆಯ ನಿರ್ಮಾಣಕನಾಗಿರುವುದರಿಂದ ಅವನನ್ನು ಐಂದ್ರಜಾಲಿ ಎನ್ನಬೇಕಾಗಿದೆ.

ಕನಿಷ್ಠತರಗತಿಯ ಜನರು ಸಮಾಜದ ಅತ್ಯವಶ್ಯವಾದ ಕೆಲಸಗಳನ್ನು ನಡೆಸುತ್ತಾರೆ. ತೋಟಿಗಳಿಲ್ಲದ ಪಟ್ಟಣದ ಸ್ಥಿತಿ ಹೇಗಾದೀತು? ಅವರು ಮುಷ್ಕರ ಹಿಡಿದರೆಂದರೆ, ದರ್ಪಶಾಲಿಯಾದ ಮಹಾರಾಜನನ್ನೂ ಒಂದು ವಾರದೊಳಗೆ ನಡುಗಿಸಬಹುದು ಆದ್ದರಿಂದ ತೋಟಿಗಳು ಸಮಾಜದ ಯಜಮಾನರಾಗಿದ್ದಾರೆ.

ಸಮಾಜದ ಮೂಲಾವಲಂಬವಾದ ಕೃಷಿಕ ಹಾಗೂ ಮಜೂರರನ್ನು ನಾವು ಅತಿ ಹೀನದೃಷ್ಟಿಯಿಂದ ನೋಡುತ್ತಿದ್ದೇವೆ ಅವರು ತಮ್ಮನ್ನು ತಾವೇ ಹಳಿದುಕೊಳ್ಳುವಂತೆ ಮಾಡಿ ಅವರಿಗೆ ನಾವು ಅನ್ಯಾಯವನ್ನು ಮಾಡಿರುತ್ತೇವೆ. ವ್ಯಾಪಕವಾಗಿರುವ ಜಾತಿಕಟ್ಟಿನ ತಪ್ಪು ತಿಳುವಳಿಕೆಯು ಮಜೂರರ ಮಾನಕ್ಕೆ ಹಾನಿಯನ್ನುಂಟುಮಾಡಿತು. ಅವರು ಪ್ರಾಪಂಚಿಕ ಸುಖಸಾಧನಗಳನ್ನು ಒದಗಿಸುವವರಾದ್ದರಿಂದ ನಮ್ಮ ಸನ್ಯಾಸಿಗಳು ಅವರನ್ನು ನೀಚರೆಂದು ತಿಳಿದರು. ಅಂಧಶ್ರದ್ಧೆಯಿಂದ ಅದನ್ನೇ ಅವಲಂಬಿಸಿಕೊಂಡ ನಾವಿನ್ನೂ ಇದ್ದೇವೆ! ದೇಶೋದ್ಧಾರವಾಗಬೇಕಾದರೆ ರಾಷ್ಟ್ರೀಯ ಮನೋಧರ್ಮವು ಬದಲಾಗಬೇಕು. ರಾಷ್ಟ್ರೀಯ ಮನೋಧರ್ಮವೆಂದರೆ ಮಜೂರರ ಮನೋಧರ್ಮವು. ಮಜೂರರು ಸಮಾಜದ ಸೂತ್ರಧಾರಿಗಳೆಂಬುದನ್ನು ಅವರೀಗ ತಿಳಿದಿಲ್ಲ. ಈ ಅರಿವನ್ನು ನಾವು ಅವರಲ್ಲುಂಟುಮಾಡಬೇಕು ಕೃಷಿಕನು "ನೇಗಿಲ ಯೋಗಿ" ಎಂಬುದನ್ನು ನಾವು ಅವರಲ್ಲಿ ಸಾರಬೇಕು. ಆಗ ಅವರಿಗೆ ತಮ್ಮ ಮೇಲೆ ಮತ್ತು ತಮ್ಮ ವೃತ್ತಿಯಮೇಲೆ ಹೊರಿಸಿದ ಅಪವಾದವೂ, ಹೀನಭಾವವೂ, ತಪ್ಪು ತಿಳುವಳಿಕೆಯು ಒಡಹುಟ್ಟುಗಳೆಂಬುದು ಮುಂದಟ್ಟಾಗಿ ತಮ್ಮ ಕರ್ಮದ ಮಹತ್ವದ ಅರಿವುವುಂಟಾಗುವುದು. ಆಗ ಅವರ ಮನೋಧರ್ಮವು

ಬದಲಾಗುವುದು. ಈ ಸತ್ಯಾಂಶವನ್ನು ಶ್ರೀಮಂತರಿಗಾಗಲಿ, ಪದವೀಧರರಿಗಾಗಲಿ ವಿವರಿಸಿ ಹೇಳಿ ಪ್ರಯೋಜನವಿಲ್ಲ. ಏಕೆಂದರೆ–ವಿದ್ಯಾಪದವೀಧರನೊಡನೆ-"ನಿನಗಿಂತ ಹಗಲಿರುಳು ಸಮಾಜಕ್ಕಾಗಿ ದುಡಿಯುವ ಕಮ್ಮಾರನೇ ಉತ್ತಮನು, ಅವನೇ ಮಾನ್ಯನು" ಎಂದರೆ ಆ ಮಾತನ್ನು ಅವನು ಮನ್ನಿಸಲಿಕ್ಕಿಲ್ಲ. ಕಾರಣ–ಅವನ ಜ್ಞಾನದೃಷ್ಟಿಯು ಪದವಿಯು ಮೇಲಿರುವ ಗೌರವದ ದರ್ಪದಿಂದ ಆವರಿಸಲ್ಪಟ್ಟಿದೆ. ಹಾಗೆಯೇ ಮಹಾರಾಜನು, ರಸ್ತೆಯಲ್ಲಿ ಕಸಬಳಿಯುವವನಿಗೆ ತಲೆಬಾಗಲಿಕ್ಕಿಲ್ಲ. ಏಕೆಂದರೆ ಅವನ ಸಂಪತ್ಸಮೃದ್ಧವಾದ ಅರಮನೆಯ ವಾತಾವರಣವು ಈ ಸತ್ಯಾಂಶವನ್ನು ಮರೆಮಾಡುತ್ತದೆ. ಕೃಷಿಕನು ಮಾತ್ರ ಈ ಸಂದೇಶವನ್ನು ಅಂಗೀಕರಿಸುವನು. ಅವನು ತಾನು ಕನಿಷ್ಠನಾಗಿದ್ದು ಸಮಾಜದಲ್ಲಿ ಬಲು ಹಿಂದೆಬಿದ್ದಿರುವೆನೆಂದು ಕಲ್ಪಿಸಿಕೊಂಡಿರುವನು. ಸಮಾಜದಲ್ಲಿ ಅವನೇ ಗಣನೀಯನೆಂದೂ ಉಳಿದವರು ಅಗಣ್ಯರೆಂದೂ ನಾವು ಅವನಿಗೆ ತಿಳಿಸಬೇಕು. ಕೃಷಿಕನೇ ಆರ್ಯನೆಂದು ಜನಜನಿತವಾದೊಡನೆ ಅವನ ಕನಸು ಹಾರಿಹೋಗುವುದು. ಅವನು ಮನುಷ್ಯತ್ವದ ಚರಮ ಸೀಮೆಯನ್ನು ಏರುವನು. ಆದ್ದರಿಂದ ಆತ್ಮಘಾತುಕವಾದ ನಮ್ಮ ಸಮಾಜದ ಹಲವು ಅಂಧಶ್ರದ್ಧೆಗಳನ್ನು ತೊರೆಯಲು ಇದೀಗ ಸಮಯವಾಗಿದೆ.

ಪ್ರಚಾರಕರೂ, ಸುಧಾರಕರೂ ಮಧ್ಯಮ ತರಗತಿಯ ಜನರ ಒಡನಾಟದಲ್ಲಿಯೇ ಇರುತ್ತಾರೆ. ಅವರು ಕನಿಷ್ಠತರಗತಿಯವರ ಕ್ಷೇಮಸಾಧನೆಗಾಗಿ ಪ್ರಯತ್ನಿಸುವುದಿಲ್ಲ. ಬೇರೆಬೇರೆ ಪಂಗಡದವರು ಮಧ್ಯಮ ತರಗತಿಯ ಜನರ ಸೌಕರ್ಯಕ್ಕಾಗಿ ಶಾಲೆಗಳನ್ನೂ, ರಸ್ತೆ, ವಿರಾಮ ಮಂದಿರಗಳನ್ನೂ, ವಾಚನಾಲಯಗಳನ್ನೂ ನಿರ್ಮಿಸುತ್ತಾರೆ. ಸರಕಾರವೂ ಸಾಮಂತರಾಜರೂ ಕೂಡ ಕನಿಷ್ಠತರಗತಿಯವರ ದ್ರವ್ಯದಿಂದ ಮಧ್ಯಮ ತರಗತಿಯ ಅನುಕೂಲತೆಗಳನ್ನು ಒದಗಿಸುತ್ತಾರೆ. ಇದರಿಂದ ಬಡ ರೈತನಿಗೆ ಯಾವ ಪ್ರಯೋಜನವೂ ದೊರೆಯುವುದಿಲ್ಲ. ಪೇಟೆ ಪಟ್ಟಣಗಳಲ್ಲಿ ಸರಕಾರದವರು ಶಾಲೆಗಳನ್ನೂ, ವಾಚನಾಲಯ, ಆಸ್ಪತ್ರೆಗಳನ್ನೂ ಧರ್ಮಾರ್ಥವಾಗಿ ತೆರೆದರೆ—ಹಳ್ಳಿಯ ಬಡರೈತನಿಗೆ ಅದರಿಂದೇನು

ಲಾಭವುಂಟು? ಹಳ್ಳಿಯ ಕೃಷಿಕನ ಸಂಪತ್ತೇ ಜಾನುವಾರುಗಳು. ಅವುಗಳು ಬೇಗನೆ ರೋಗಕ್ಕೆ ಬಲಿಬೀಳುವಂಥವುಗಳು. ಒಂದೆರಡು ಎತ್ತುಗಳು ತೀರಿಹೋದರೆ ಬಡರೈತನ ಜೀವನರಸವೇ ಆರಿದಂತೆ. ಹೀಗಿರುವಾಗ ಅವುಗಳ ರಕ್ಷಣೆಗಾಗಿ ಸರಕಾರವು ಏನು ಮಾಡುತ್ತಿದೆ. ಗೋ ಆಸ್ಪತ್ರೆಗಳನ್ನು ತೆರೆದಿದ್ದರೆ, ತಾಲೂಕಿಗೊಂದು. ಅಂದರೆ, 105ಗ್ರಾಮಗಳಿಗೊಂದು. ಇದರಿಂದ ಹಳ್ಳಿಯ ರೈತನಿಗೆ ಪ್ರಯೋಜನವಿಲ್ಲವೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಇನ್ನು ಜಾನುವಾರುಗಳನ್ನು ಮೇಯಿಸಲಿಕ್ಕೆ ಹುಲ್ಲುಗಾವಲಾದರೂ ಬೇಕಾದಷ್ಟು ಬಡರೈತನಿಗಿದೆಯೇ. ಸೂಜಿ ಊರು ವಷ್ಟು ಸ್ಥಳವು ಅವನಿಗಿಲ್ಲ. ಇದ್ದ ಕಾಡುಗುಡ್ಡಗಳು ದೊಡ್ಡ ಜಮೀನ್ದಾರರ ಲಗ್ಗಾಭೂಮಿಗಳಾಗಿಹೋಗಿ, ಅವರಿಗೆ, ತರಗೆಲೆ ಹುಲ್ಲುಮಾರಿ ಗಂಟು ಕಟ್ಟಲು ಆಸ್ಪದವಾಗಿದೆ. **ಒಟ್ಟಿನ ಮೇಲೆ ಎತ್ತುಗಳಂತೆ ದುಡಿಯುವ ಭಾಗ್ಯವು ಮಜೂರರದು! ದುಡಿತದ ಪ್ರತಿಫಲವನ್ನು ಉಣ್ಣುವ ಭಾಗ್ಯ ಧನಿಕರದು.**

ಸುಧಾರಕರಲ್ಲಿ ಉಗ್ರವಾದಿಗಳೂ (extrimist) ಕೂಡ ಕೃಷಿಕರ ಗೊಡವೆಯನ್ನು ಹಚ್ಚಿಕೊಳ್ಳುವುದಿಲ್ಲ. ಆದರೆ ಸಮತಾವಾದವು ಪ್ರಚಾರಕ್ಕೆ ಬಂದಮೇಲೆ ಎಲ್ಲರದೃಷ್ಟಿಯೂ ಕೃಷಿಕರಮೇಲೆ ಬಿದ್ದಿದೆಯೆಂದು ಅಸ್ಪಷ್ಟ ವಾಗಿಮಾತ್ರ ಹೇಳಬಹುದು. ರಾಯರ ದೃಷ್ಟಿಯು ತೆನ್ನಾಲ ರಾಮಕೃಷ್ಣನ ಮೇಲೆ ಬಿದ್ದಂತೆ ನಮ್ಮ ಸರಕಾರದ ದೃಷ್ಟಿಯು ಮಜೂರರಮೇಲೆ ಬಿದ್ದರೂ ರೈತರ ಹಿತಸಾಧಕ ಕಾರ್ಯಗಳು ಜಡ್ಡು ಹಿಡಿದು ಹುಳಿಯುತ್ತಿರುವುದು ಶೋಚನೀಯ.

ಕೃಷಿಕರ ಮತ್ತು ಮಜೂರರ ಜೀವನವು ಈಗ ಅತ್ಯಂತ ಹೀನಸ್ಥಿತಿ ಯಲ್ಲಿದೆ. ಕೃಷಿಕರು ಹೊಟ್ಟೆಗೂ ಬಟ್ಟೆಗೂ ಇಲ್ಲದೆ, ಮಿತಿಮೀರಿದ ಕಂದಾಯದ ಭಾರಣೆಗೆ ಕುಗ್ಗಿಹೋಗಿದ್ದಾರೆ. ಅವರ ಪ್ರಾಣವನ್ನು ಘನ ರೋಗವು ನಿತ್ಯವೂ ಕಪ್ಪಗೊಳ್ಳುತ್ತವೆ. ಕಾಲದ ಶೂನ್ಯತೆಯು ಅವರ ಮುಖದಲ್ಲಿ ಕೆತ್ತಲ್ಪಟ್ಟಿದೆ. ಕೃಷಿಕನು ನೇಗಿಲಬಳಿ ನಿಂತಿರುವಾಗ, ನಿರುಪಾಯಳಾದ ಭಾರತಾಂಬೆಯ ನಿರಾಶೆಯ ದೀನಚಿತ್ರವಿದೋ ಎಂಬಂತೆ

ಭಾಸವಾಗುತ್ತದೆ. ಬಾಹ್ಯಜಗತ್ತಿನ ಮರವೆಯಿಂದಲೂ, ದುಃಖದಿಂದ ಕಲಕಿತವಾದ ಹೃದಯದಿಂದಲೂ, ನಿರಾಶೆಯಿಂದ ಬಿಗಿದ ಮೌನದಿಂದಲೂ, ಶ್ರೇಷ್ಠ ಜೀವನದ ವಿಸ್ಮರಣೆಯಿಂದಲೂ ತುಂಬಿರುವ ಹಳ್ಳಿಯ ಕೃಷಿಕನಿಗೆ ತನ್ನ ಸಂಕಷ್ಟಗಳನ್ನು ಹಾಡಲು ಚೈತನ್ಯವು ಬೇಕಾಗಿದೆ! ಅವನ ಹಾಡಿನ ಮುಂದೆ ಸೀತಾಪ್ರಲಾಪವಾಗಲಿ, ದಮಯಂತಿಯ ದುಃಖವಾಗಲಿ ಸರಿತೂಗದು. ಅವನು ಹಾಡಿದನೆಂದರೆ ಆದಿಕವಿ ವಾಲ್ಮೀಕಿಯೂ ತಲೆತಗ್ಗಿಸಬೇಕು.

ಮಜೂರರು ಅತಿ ದರಿದ್ರರಾಗಿದ್ದಾರೆ. ಅವರಿಗೆ ಸಹಾಯ ಮಾಡುವವರು ದರಿದ್ರರಾಗಿರಬೇಕು. ನೀವು ಅವರ ಅಭ್ಯುದಯವನ್ನು ಆಕಾಂಕ್ಷಿಸುತ್ತೀರಾದರೆ ನೀವು ಅವರೊಡನೆ ವಾಸಿಸುತ್ತಿರಬೇಕು; ಅವರ ಕಲಸುಗೂಳನ್ನು ಉಂಡು, ಅವರ ಒರಟು ಭಾಷೆಯನ್ನು ಆಡುವವರಿರಬೇಕು. ನೀವು ಸರದಾರರಂತೆ ಅವರ ಬಳಿಗೆ ಹೋದರೆ ಪ್ರಯೋಜನವಿಲ್ಲ. ಸುಧಾರಕರು ಅವರಂತೆ ಕೆಲಸಗಾರರಾಗಿ ಅವರ ಒಡನಾಟವನ್ನು ಬಯಸಬೇಕು. ಹಾಗೆ ಮಾಡದೆ ಕೇವಲ ಕೂಟಗಳನ್ನು ಕೂಡಿಸಿ ಭೂಮಿಕೆಯ ಮೇಲೆ ನಿಂತು ಉಪನ್ಯಸಿಸಿದರೆ ಪ್ರಯೋಜನ ಸಿಗಲಾರದು. ಮಜೂರರ ಉದ್ಧಾರವನ್ನು ಮಾಡಬೇಕಾದರೆ—ಅವರ ಮಧ್ಯಕ್ಕೆ ಧುಮುಕಿ, ಅವರೊಡನೆ ಒಡನಾಡಿ ಅವರನ್ನು ಒಟ್ಟುಗೊಳಿಸಬೇಕು. ಅವರಲ್ಲಿ ಪರಸ್ಪರ ಐಕ್ಯವು ಬೆಳೆಯುವಂತೆ ಯತ್ನಿಸಬೇಕು. ಈಗ ಮಜೂರರೂ ಮತ್ತು ಕೃಷಿಕರೂ ಅವ್ಯವಸ್ಥಿತರಾಗಿದ್ದಾರೆ. ಅವರನ್ನು ವ್ಯವಸ್ಥೆಗೊಳಿಸುವುದು ಸುಧಾರಕರ ಆದ್ಯಕರ್ತವ್ಯವಾಗಿದೆ. ಹಳ್ಳಿಯ ಉದ್ಧಾರವು, ರಾಜರಿಂದಾಗಲಿ, ಜಮೀನುದಾರರಿಂದಾಗಲಿ, ವಕೀಲರು, ಬೇಂಕರರಿಂದಾಗಲಿ ಆಗತಕ್ಕುದಲ್ಲ. ಇವರೆಲ್ಲಾ ಸ್ವಾರ್ಥದ ಭಂಡಾರಗಳು. ತಮ್ಮ ಐಹಿಕಸುಖಕ್ಕಾಗಿ ಕೃಷಿಕನ ರಕ್ತವನ್ನು ಹೀರುವಂಥವರು. ಆದ್ದರಿಂದ ನಿಃಸ್ವಾರ್ಥಪರರೂ ಪ್ರೇಮಾರ್ದ್ರಚಿತ್ತರೂ ಆದ ವಿದ್ಯಾವಂತ ತರುಣರು ಈ ಕೆಲಸಕ್ಕೆ ಕೈಹಚ್ಚಬೇಕಾಗಿದೆ ಬಡತನದ ಬಾಡಬವನ್ನೂ, ಬಿರುನುಡಿಯ ಬಿರುಸನ್ನೂ ದಕ್ಕಿಸಿಕೊಳ್ಳುವ

ಸಾಮರ್ಥ್ಯವು ಅವರಲ್ಲಿರಬೇಕು. ಅಂಥವರ ಅವತಾರಣಿಕೆಯನ್ನೇ ಕೃಷಿಕನು ನಿರೀಕ್ಷಿಸುತ್ತಿದ್ದಾನೆ! ಯಾವ ದಿಕ್ಕಿನಿಂದ ಬೆಳಕು ತನಗೆ ದೊರೆದೀತೆಂದು ನೇಗಿಲ ಯೋಗಿಯು ನಾಲ್ಕು ದಿಕ್ಕುಗಳಿಗೂ ತನ್ನ ದೈನ್ಯ ದೃಷ್ಟಿಯನ್ನು ಹರಿಸುತ್ತಿದ್ದಾನೆ! ಆದ್ದರಿಂದ ಸುಶಿಕ್ಷಿತ ತರುಣರು ಎಚ್ಚತ್ತು ಆಲಸ್ಯದ ಶೃಂಖಲೆಗಳನ್ನು ಕಡಿದೊಗೆದು, ಉತ್ಸಾಹದ ದಟ್ಟಿಯನ್ನು ಬಿಗಿದು, ಸತ್ಯಾಗ್ರಹ ಧ್ವಜವನ್ನು ಹಾರಿಸಿ, ದೇಶಭಕ್ತಿ ಎಂಬ ವಜ್ರಾಯುಧವನ್ನು ಝಳಪಿಸುತ್ತಾ ನಿಮ್ಮ ಪೌರುಷದ ಎಸಕದಿಂದ ದಶದಿಕ್ಕುಗಳನ್ನು ಬೆಳಗಿಸಿ ಪಾರತಂತ್ರ್ಯದ ಅಂಧಕಾರವನ್ನು ನಿವಾರಿಸಿರಿ! ಇದರ ಋಜು ಮಾರ್ಗವೆಂದರೆ ಹಳ್ಳಿಯ ಸಂಸ್ಕೃತಿ, ಸಂಘಟನೆಗಳಿಗಾಗಿ ದುಡಿಯಲು ಹಳ್ಳಿಗರೊಡಗೂಡಿ ಸಾಧಾರಕರೀತಿಯಲ್ಲಿ ಬೆವರಿಳಿಸುವುದು.



# ವಿನೋದಭಾರತ

ಪ್ರತಿ ಗುರುವಾರ ಗ್ರಂಥರೂಪದಲ್ಲಿ ಹೊರಡುವ

## ವಾರಪತ್ರಿಕೆ

ಇದರ ಮಾದರಿ ಸಂಚಿಕೆಯು ನಮ್ಮ ಕೈಸೇರಿರುತ್ತದೆ.


ಸಂಪಾದಕರು:

ಮಂಗಳೂರು ಚಾರಪ್ಪ

ಉಪಸಂಪಾದಕರು:

ಬಿ. ನರ್ಸಪ್ಪ



ಪ್ರಕಾಶಕರು:

ದಿ ಬಡವರ ಬಂಧು ಪ್ರಿಂಟಿಂಗ್ ಪ್ರೆಸ್, ಲಿಮಿಟೆಡ್,

ಮಂಗಳೂರು.

